ರಭಾರತ ಗ್ರಂಥಮಾಲೆ : ೧೧ ವರ್ಷ : ೨

ಬಲಿದಾನ

# ಬಲಿದಾನ

ಐತಿಹಾಸಿಕ ಕಾದಂಬರಿ

ಬರೆದವರು :-
ಪಿ. ವಿಜಯಕುಮಾರ,
ಕಣಬರಗಿ.

೯೫೨ : :: ಬೆಲೆ: ೦-೧೨-೦

ರರು:—
ಜಿತ ಏಜನ್ಸಿ, ಟಿಳಕಚೌಕ-ಬೆಳಗಾವಿ.

ವೀರಭಾರತ ಗ್ರಂಥಮಾಲೆ : ೧೧

# ಬಲಿದಾನ

( ಐತಿಹಾಸಿಕ ಕಾದಂಬರಿ )

ಬರೆದವರು:-

ಪಿ. ವಿಜಯಕುಮಾರ

೧೯೫೨ : :: : ಬೆಲೆ ೦-೧೨-೦

ಅಜಿತ ಪ್ರಕಾಶನ, ಬೆಳಗಾವಿ.

ಬರೆದವರು :-

ಛ. ವಿಜಯಕುಮಾರ

★ ★



★ ಮುದ್ರಕರು ಮತ್ತು
ಪ್ರಕಾಶಕರು :-
ಎ. ಪಿ. ಚೌಗುಲೆ
ವೀರಭಾರತ ಮುದ್ರಣಾಲಯ,
ಬೆಳಗಾವಿ. ★

# ಮುನ್ನುಡಿ.

ಶ್ರೀಮಾನ ವಿಜಯಕುಮಾರ ಪಾಟೀಲ ಇವರು ಬರೆದ ಚಿಕ್ಕ ಕಾದಂಬರಿ "ಬಲಿದಾನ" ಎಂಬ ಪುಸ್ತಕವನ್ನು ಓದಿ ನೋಡಿ ನನಗೆ ಆನಂದವಾಯಿತು. ಅವರ ಸರಳವಾದ ಭಾಷಾ ಶೈಲಿಯು ಚಿಕ್ಕ ಮಕ್ಕಳಿಗೂ ಕೂಡ ಹಿಡಿಸುವಂಥದಿದೆ. ಚಿಕ್ಕ ಮಕ್ಕಳಿಂದ ಎಲ್ಲ ವಯಸ್ಸಿನ ಜನರಿಗೂ ಸ್ಫೂರ್ತಿದಾಯಕವಾದ ಕಥೆ ಇದೆ. ಈಗ ಸದ್ಯಕ್ಕೆ ನಮ್ಮ ದೇಶದ ಜನರಿಗೆ ಇತಿಹಾಸದ ನಿಜವಾದ ಜ್ಞಾನವಿಲ್ಲ. ಆದ್ದರಿಂದ ಪ್ರತಿಯೊಬ್ಬ ಲೇಖಕನೂ ಆದಷ್ಟು ಮಟ್ಟಿಗೆ ಜನತೆಗೆ ನಮ್ಮ ಆರ್ಯ ಜನರ ಪರಿಚಯವನ್ನು ಮಾಡಿ ಕೊಡಬೇಕು. ಇಂದಿಗೆ ನಮ್ಮ ಪಾವನವಾದ ಭರತಖಂಡವು ಎಲ್ಲ ದೃಷ್ಟಿಯಿಂದಲೂ ಹಿಂದುಳಿದಿದೆ. ಇದಕ್ಕೆ ನಮ್ಮಲ್ಲಿಯ ಸಂಕುಚಿತವಾದ ಜಾತಿ ಹಾಗೂ ಪ್ರಾಂತೀಯತೆಗಳೇ ಕಾರಣ. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಹೆಜ್ಜೆ ಇಟ್ಟ ಆರ್ಯ ಜನರ ಪುಣ್ಯಮಯವಾದ ಭಾರತ ದೇಶದ ಅಭ್ಯುದಯ ಬಗ್ಗೆ ಪ್ರತಿಯೊಬ್ಬನೂ ವಿಚಾರ ಮಾಡಿದರೆ ಅಭ್ಯುದಯವಾಗುವದರಲ್ಲೇನು ತಡ! ಆದರೆ ಕೇವಲ ಕರ್ನಾಟಕ ಮಹಾರಾಷ್ಟ್ರಗಳೆಂಬ ಹೀನ ವಿಚಾರದೊಂದಿಗೆ ಪ್ರೇಮ ಭಾವವನ್ನು ಮರೆತು, ನಮ್ಮ ಶಕ್ತಿಯನ್ನು ಕಳೆಕೊಳ್ಳಹತ್ತಿದ್ದೇವೆ. ಆಹಾ ಏನು ವಿಚಾರ! ಭಾರತದೇಶವು ಸ್ವತಂತ್ರವಾಗಿ ಇಂದಿಗೆ ಸುಮಾರು ನಾಲ್ಕೂವರೆ ವರ್ಷಗಳಾದವು. ಆದರೆ ನಮಗೆ ಇನ್ನೂ ರಾಷ್ಟ್ರೀಯತ್ವದ ಕಲ್ಪನೆ ಮೂಡಿಲ್ಲ; ಧರ್ಮದ ಸದುದ್ದೇಶ ಮೂಡಿಲ್ಲ. ಭಾರತದ ಮೂಲ ಅಂಗವಾದ ಆರ್ಯ ಧರ್ಮವು ಸಮಸ್ತ ಜಗತ್ತಿಗೂ ಧರ್ಮದ ನೀತಿಯನ್ನು ತಿಳಿಸಿ ಕೊಟ್ಟ ಈ ಹಿಂದೂ ಧರ್ಮವು, ಇಂದಿಗೆ ತನ್ನ ತವರ ಮನೆಯಲ್ಲಿಯೇ ದುಃಖಪಡಬೇಕಾಗಿದೆ. ಸಮಸ್ತ ಅನ್ಯಾಯಗಳನ್ನು ಮುರಿದೊಗೆದು, ಧರ್ಮದ ಗುರಿಯನ್ನೇ ಮೂಲ ಉದ್ದೇಶವನ್ನಿಟ್ಟುಕೊಂಡು ಪ್ರಗತಿ ಪ್ರಥದಲ್ಲಿ ಕಾಲಿಡುತ್ತಿದ್ದ ಹಿಂದೂ ಜನರು ಇಂದಿಗೆ ಸ್ವಾರ್ಥಪರರಾಗಿ, ತಮ್ಮ ತಮ್ಮ ಜನರ ಗೋಣನ್ನೇ ನಿಷ್ಕರುಣೆಯಿಂದ ಮುರಿಯಹತ್ತಿದ್ದಾರೆ. ಹೀಗಾದರೆ ಭಾರತದ ಭಾಗ್ಯವಾಗುವದೆಂತು? ಆದ್ದರಿಂದ ಪ್ರತಿಯೊಬ್ಬ ಭಾರತೀಯನು ತನ್ನ ಕಣ್ಮುಂದೆ, ತನ್ನ ಧೀರ ವೀರರಾದ ಪೂರ್ವಜರ ಚಿತ್ರವನ್ನು ಇಟ್ಟುಕೊಂಡು, ಅವರ ಹೆಜ್ಜೆಯಮೇಲೆ

ನಾವು ಹೆಜ್ಜೆಯನ್ನಿಟ್ಟರೆ, ನಮ್ಮ ಮಾತೆಯ ಕಲ್ಯಾಣ ವಾಗುವದರಲ್ಲಿ ಏನೂ ಸಂದೇಹವಿಲ್ಲ. ಅದಕ್ಕಾಗಿ ನಾವು ಹೆಚ್ಚಿಗೆ ಮಾಡ ಬೇಕಾದ ಕಾರ್ಯ, ಅಥವಾ ಬೀಜನೆಟ್ಟು ಅದನ್ನು ನಮ್ಮ ರಕ್ತದಿಂದ ಬೆಳಿಸುವ ಕರ್ತವ್ಯ ಇಂಥವುಗಳೊಂದೂ ಇಲ್ಲ. ಆದ್ದರಿಂದ ಅಂಜುವದೇಕೆ! ನಮ್ಮ ಪೂರ್ವಜರು ತಮ್ಮ ಸ್ವಪರಾಕ್ರಮದಿಂದ ನೆಟ್ಟ ಬೀಜನ್ನು, ತಮ್ಮ ವೈಭವವನ್ನು ತ್ಯಾಗ ಮಾಡಿ, ರಕ್ತದ ಮಳೆ ಸುರಿಸಿ, ಹಗಲಿರುಳೆನ್ನದೆ ಬೆಳೆಸಿದ ಮರವನ್ನು, ಈಗ ನಮ್ಮಿಂದ ಕೇವಲ ಸಂರಕ್ಷಿಸಲಿಕ್ಕಾಗದಿದ್ದರೆ ಭಗವಾನ ಶ್ರೀರಾಮ ಚಂದ್ರರ ವಂಶಜರೆನ್ನಿಸಿಕೊಳ್ಳುವ ನಮಗೆ ಎಳ್ಳಷ್ಟಾದರೂ ಬುದ್ಧಿ ಬರ ಬೇಕು. ಆರ್ಯ ಧರ್ಮದ ಉದಾತ್ತ ಸಂಸ್ಕೃತಿಯನ್ನು ಸರ್ವ ಧರ್ಮ ಪರಿಷ ತ್ತಿನಲ್ಲಿ ತೋರಿಸಿ ಕೊಟ್ಟು, ವಿಶ್ವ ಜೆಂಕ್ಯರಾದ ವೀರಯೋಗಿ ಸ್ವಾಮಿ ವಿವೇಕಾನಂದರ " If a Hindu is not spirtual I never call hin a Hindu " ಎಂಬ ವಾಣಿಯನ್ನು ಹಿಂದುಸ್ಥಾನ ತುಂಬ ಹರಡಿ ಸ್ಫೂರ್ತಿ ಕೊಟ್ಟ ಆ ವಾಣಿಯನ್ನು ನಾವಿಂದಿಗೆ ನೆನಪಿಗೆ ತಂದುಕೊಳ್ಳಬೇಕಾಗಿದೆ. ಹಿಂದೂಗಳ ಮಾನವನ್ನುಳಿಸಿದ ವೀರ ಶಿವಾಜಿ, ಮಹಾರಾಣಾ ಪ್ರತಾಪಸಿಂಹ, ಮಹರ್ಷಿ ವಿದ್ಯಾರಣ್ಯ ಸ್ವಾಮಿ ಇತ್ಯಾದಿ, ಮೊದಲಾದವರ ಕಾರ್ಯವನ್ನು ನೆನಪಿಸಿ ನಮ್ಮ ಧರ್ಮದ ಕಲ್ಯಾಣಕ್ಕಾಗಿ, ಭಾರತ ದೇಶದ ವೈಭವಕ್ಕಾಗಿ ತಮ್ಮ ಸರ್ವಸ್ವವನ್ನೇ ತ್ಯಾಗ ಮಾಡಿದ ನರವೀರ ಸುಭಾಷಚಂದ್ರ, ಪಂಡಿತನೆಹರೂ, ಮಹಾತ್ಮಾಗಾಂಧಿ, ಇವರೆ ಲ್ಲರ ಆದರ್ಶವನ್ನಿಟ್ಟುಕೊಂಡು ಪ್ರಗತಿಪಥದಲ್ಲಿ ಕಾಲಿಡುವಿರೆಂದು ನಂಬಿ ತುವೆ.

ಭಗವಾನ ಸಿದ್ಧೇಶ್ವರರು ಭಾರತವಾಸಿಗಳೆಲ್ಲರಿಗೂ ಕಲ್ಯಾಣ ಮಾಡಲೆಂದು ಪ್ರಾರ್ಥಿಸುವೆ.

ಭಾರತ ದೇಶದ ವಿನೀತ ಸೇವಕ

ಲಿಂಗನಗೌಡ ಪಾಟೀಲ.

# ಮೊದಲು ಮಾತು.

ವಾಚಕ ಬಂಧು ವರ್ಗ,

ಪ್ರಥಮ ಕಾದಂಬರಿಯಾದ ' ಬಲಿದಾನ ' ವು, ಅಲ್ಪ ಸ್ವಲ್ಪ ಕೆಸರಿನಿಂದ ಕೂಡಿರಬಹುದು. ಆದರೆ ಅದನ್ನು ತೊಳೆದು, ಸ್ವಚ್ಛ ಮಾಡಿ ವಿಶ್ವದ ಕಣ್ಣಿಗೆ ಆದರ್ಶವನ್ನಿಟ್ಟು, ಈ ತರದ ವಿಚಾರಗಳಿಗೆ ಪ್ರೋತ್ಸಾಹನವನ್ನೀಯುವ ಕರ್ತವ್ಯ, ವಾಚಕ ವರ್ಗದವರದು. ಈ ತರದ ಮಹತ್ವದ ಜವಾಬ್ದಾರಿಯನ್ನು ವಹಿಸಿದ್ದಕೆ ತಾಳ್ಮೆಯಿರಲಿ.

ಈ ಪುಸ್ತಕವನ್ನು ಬರೆಯುವದರಲ್ಲಿ ಒಂದು ಮಹತ್ವದ ಗುರಿಯಿದೆ. ಸಕಲ ಮಾನವರೂ ಪ್ರೇಮ ಭಾವದಿಂದ ಬಾಳಲಿ, ಸನಾತನವಾದ, ದಿವ್ಯವಾದ, ಆರ್ಯ ಧರ್ಮವು, ಪೂರ್ವಕ್ಕಿಂತಲೂ ಹೆಚ್ಚಿನ ತೇಜದಿಂದ ಬೆಳಗಲಿ. ಮೊಗಲರ ಕಾಲದಿಂದಲೂ ನಡೆದ ನಮ್ಮ ಅಂತಃಕಲಹ, ಬಡಿದಾಟ, ರೋದನಗಳನ್ನು ಸಾಕು ಮಾಡೋಣ. ಧರ್ಮ ತೇಜ ಬಲದಿಂದ ಭಗೀರಥ ರಾಜನು ಗಂಗಾವತರಣ ಮಾಡಿದಂತೆ, ಪೂರ್ವಜರ ಬಲಿದಾನದ ಪುಣ್ಯನಿಧಿಯಿಂದ ಮಹಾತ್ಮಾ ಗಾಂಧೀಜಿಯವರ " **चले जाव** " ಚಳವಳಿಯಿಂದ, ಭಾರತ ಮಾತೆಯ ಬಂಧ ಮುಕ್ತಿಗಾಗಿ ಪರದೇಶದಿಂದ ಬಡಿದಾಡಿದ ವೀರ ಸುಭಾಷಚಂದ್ರರ " On to Delhi " ಎಂಬ ಘೋಷಣೆ ( Slogan ) ಯಿಂದ, ಬ್ರಿಟಿಶರು ತೊಲಗಿದರು. ಭಾರತಾಂಬೆಯು ಸ್ವತಂತ್ರಳಾದಳು. ಆದರೆ ಭಾರತ ದೇಶ ಇನ್ನೂ ಬಡತನದಿಂದ ಕೊರಗುತ್ತಲಿದೆ. ಸರಕಾರದ ತಪ್ಪಲ್ಲ. ಮೊದಲಿನ ತಪ್ಪು ನಮ್ಮದು. ನಾವೇ ಸ್ವಾರ್ಥಲೋಲುಪಗಳಾಗಿ ಬಡವರ ರಕ್ತದ ಅನ್ನವನ್ನು ಕಸಿದುಕೊಂಡು, ಅವರ ಹಣದಿಂದ ಶ್ರೀಮಂತರಾಗುತ್ತಿದ್ದೇವೆ. ಮೇಲೆ ಮೇಲೆ ದೇಶ ಭಕ್ತಿಯ, ಭಾರತದ ಕಲ್ಯಾಣದ ಮಾತುಗಳನ್ನು ಆಡುತ್ತಲಿದ್ದೇವೆ. ' ಯಥಾ ರಾಜಾ ತಥಾ ಪ್ರಜಾ ' ಎಂಬ ಮಾತು, ವಿರುದ್ಧ ದಿಶೆಯಲ್ಲಿ ಹೊರಳಿದೆ. ಪರದೇಶದ ಪದ್ಧತಿಯಂತೆ ಸಮಾನ ಹಕ್ಕುಗಳಿಗಾಗಿ ಬಡಿದಾಡುತ್ತಲಿದ್ದ ಸ್ತ್ರೀಯರು, ಪತೀವ್ರತಾ ಧರ್ಮವನ್ನು ಮೂಲೆಗೊತ್ತಿದ್ದಾರೆ. ಇದರ ಮೇಲಿಂದ ತೋರುವದೇನೆಂದರೆ, ಬ್ರಿಟಿಶರು ಭಾರತದಿಂದ ತೊಲಗಿದರೂ, ಬ್ರಿಟಿಶ ಸಂಸ್ಕೃತಿಯು ಇಲ್ಲಿ ಅಚ್ಚ

ಳಿಯದೆ ನಿಂತಿದೆ. ಆಲದ ಮರದಂತೆ ತನ್ನ ಶಾಖೆಗಳನ್ನು ವಿಸ್ತಾರವಾಗಿ ಹರಡುತ್ತಲಿದೆ. ಅಂದ ಮೇಲೆ ಇಂತಹ ಸ್ವರಾಜ್ಯದಿಂದೇನುಪಯೋಗ? ಈ ತರದ ಸ್ವಾತಂತ್ರ್ಯದ ಉಪಯೋಗವನ್ನು ಮಾಡಿಕೊಳ್ಳಲಿಕ್ಕೆ ಮ. ಗಾಂಧಿಯವರು ಶ್ರಮಿಸಲಿಲ್ಲ. ಬ್ರಿಟಿಶರ ಕಾಲ್ಡಡಿಯಲ್ಲಿ ನರಳಾಡುತ್ತಿರುವ ಭಾರತೀಯರನ್ನು ಸುಖಸಾಮ್ರಾಜ್ಯಶಾಹಿಗಳನ್ನಾಗಿ ಮಾಡಲಿಕ್ಕೆ ಏಕ ವಸ್ತ್ರದಿಂದ ತಮ್ಮ ದೇಹ ಸವೆಸಿದರು. ಆದರೆ ಇಂದಿಗೆ ಏನು ನಡೆದಿದೆ? ಪೂಜ್ಯ ಗಾಂಧೀಜಿಯವರ ವಾಣಿಯು ಇಂದಿಗೆ ಯಾವ ಮೂಲೆಯಲ್ಲಿ ಕುಳಿತಿದೆ? ಗಾಂಧೀಜಿಯವರ ಕನಸಿನ ರಾಮರಾಜ್ಯವಾಗಬೇಕಾದರೆ, ಮೊದಲಿಗೆ ನಾವು ಒಬ್ಬರೊಬ್ಬರಲ್ಲಿ ಪ್ರೇಮ ಭಾವವನ್ನು ತಾಳಲಿಕ್ಕೆಬೇಕು. ಒಬ್ಬರ ಅಂತಃಕರಣದ ರಸವನ್ನು ಮತ್ತೊಬ್ಬ ದುಃಖಿತನಿಗೆ ಅರ್ಪಣ ಮಾಡಲಿಕ್ಕೆ ಬೇಕು. ನಮ್ಮಲ್ಲಿಯ ಸಕಲ ಭೇದ-ಭಾವಗಳನ್ನು ಮರೆತು, ಪ್ರೇಮ ಭಾವದಲ್ಲಿ ವಿಲೀನರಾಗಬೇಕು. ಆ ಮೇಲೆ ನಮಗೆ ಅಂಜಿಕೆಯನ್ನು ತೋರಿಸಲು, ನಮ್ಮ ಮೇಲೆ ಬಲಾತ್ಕಾರ ಮಾಡಲು, ಪರದಾಸ್ಯದಲ್ಲಿ ನೂಕಲು ಯಾವ ಶಕ್ತಿಯೂ ಮುಂದೆ ಬರಬಾರದು. " ಅಯೋಧ್ಯಾ, ಮಥುರಾ, ಮಾಯಾ। ಕಾಶೀ, ಕಾಂಚೀ, ಅವಂತಿಕಾ | ಪುರೀದ್ವಾರಾವತಿ ಚೈವ, ಸಪ್ತೈತಾ ಮೋಕ್ಷದಾಯಿಕಾ । ಎಂಬ ಪುರಾತನ ಮಹರ್ಷಿಗಳು ಹಾಕಿ ಕೊಟ್ಟ ಭಾರತದ ಚಿತ್ರವನ್ನು ಪ್ರತಿಯೊಬ್ಬ ವೇದ ಧರ್ಮಾಭಿಮಾನಿಯು ಕಣ್ಮುಂದೆ ತಂದರೆ, ಯಾವನ ಸಿರವು " ಸಮುದ್ರವಸನೇ ದೇವಿ | ಪರ್ವತಸ್ತನಮಂಡಲೇ । ವಿಷ್ಣು ಪತ್ನಿನಮಸ್ತುಭ್ಯಂ । ಪಾದಸ್ಪರ್ಶಂ ಕ್ಷಮಸ್ವಮೇ " ಎಂದು ತಲೆಬಾಗಿಸಲಿಕ್ಕಿಲ್ಲ | ಮಹರ್ಷಿ ವಿದ್ಯಾರಣ್ಯ ಸ್ವಾಮಿಯವರು, ಸಮರ್ಥ ರಾಮದಾಸ ಸ್ವಾಮಿಯವರು, ಕೇವಲ ಕರ್ನಾಟಕ, ಮಹಾರಾಷ್ಟ್ರಗಳಿಗಾಗಿ, ತಮ್ಮ ಶಿಷ್ಯರಿಂದ ರಕ್ತ ಸುರಿಸಲು ಹಚ್ಚಲಿಲ್ಲ. ಅವರಿಗೆ ತಮ್ಮ ಧರ್ಮದ ಬಗ್ಗೆ, ದೇಶದ ಬಗ್ಗೆ ಅಭಿಮಾನವಿತ್ತು ಹಿಮಾಲಯದ ಒಂದು ತುಂಡಿಗೆ ಯಾವನೇ ದ್ವೇಷಿಯು ಪೀಡೆ ಕೊಟ್ಟರೆ ಕನ್ಯಾಕುಮಾರಿಯು ಜಾಗೃತವಾಗುವದೆಂಬ ವಿಶ್ವಾಸ ಆ ಮಹಾನುಭಾವರಲ್ಲಿತ್ತು. ಆದರೆ ದ್ವೇಷಿಗರ ದ್ವೇಷಿಕರಿವರಲ್ಲ. ಸಕಲರ ಮೇಲೆಯೂ ಪ್ರೇಮ ಭಾವನೆಯನ್ನು ತಾಳತಕ್ಕವರು ಸಕಲ ಧರ್ಮಗಳ ಮೂಲ ಮಂತ್ರವಾದ " ಅಹಿಂಸಾ ಪರಮೋ ಧರ್ಮಃ " ಎಂಬದನ್ನೇ ಮೂಲೋದ್ದೇಶವನ್ನಿಟ್ಟುಕೊಂಡು ಆರ್ಯ ಧರ್ಮಕ್ಕೆ ಜೀವನದಾನ ಮಾಡಿದರು. ಆರ್ಯ ಧರ್ಮದಲ್ಲಿ

ಯಾವಾಗ ಈ ಉಪ್ಕೇಶದ ಆಕ್ರಮಣವಾಯಿತೋ, ಆಗ ಮಹಾತ್ಮಾ ಸಿದ್ಧಾರ್ಥ ಅರ್ಥಾತ ಗೌತ್ರಮಬುದ್ಧರಂಥ ಮಹಾಜ್ಞಾನಿಗಳು ತಡೆಹಿಡಿಯಲು ಉದ್ಧರಿಸುತ್ತಾರೆ. ಆಹುದು, ಇದೇ ಧರ್ಮಕ್ಕಾಗಿ ಸಿದ್ಧಾರ್ಥನು, ಅರಮನೆ, ಪತ್ನಿ, ಪುತ್ರರನ್ನು ಮರೆತು, ಜನಕ, ರಾಜ್ಯ ಲೋಭಗಳನ್ನು ತೊರೆದು, ಸಕಲರಲ್ಲಿಯೂ ಪ್ರೇಮಭಾವವನ್ನು ಬೀರಿದ. ಆದಕ್ಕಾಗಿ ಮನೆ ಮನೆಗೆ ಭಿಕ್ಷೆ ಬೇಡಿದ; ಸತ್ಯ ಸಿದ್ಧಾಂತವನ್ನು ತೋರಿಸಿ ಕೊಟ್ಟ, ಇದನ್ನೇ ವಿವೇಕಾನಂದರು ಯು. ಎಸ್. ಎ. ಯ ಒಂದು ಸಭೆಯಲ್ಲಿ ಮಾತಾಡುತ್ತಾರೆ.
" ....he [ Sidhartha ] gave up his throne and every thing else, and went about begging his bread through the streets of India, Preaching for the good of men and animals with a heart as wide as the ocean. He was the only man who was ever ready to give up his life for animals, to stop for a sacrfice. " ಈ ತರದ ಅಭಿಮಾನದ ಮಾತುಗಳು ಭಾರತದ ಹೊರ್ತು ಮತ್ತಾವ ಮೂಲೆಯಲ್ಲೂ ಸಿಗಲಿಕ್ಕಿಲ್ಲ; ಇಷ್ಟೇ ಅಲ್ಲ, ಪರದೇಶಕ್ಕೆ ಹೋಗಿ ತಮ್ಮ ಸಂಸ್ಕೃತಿಯ ಹೆಗ್ಗುರಿಯನ್ನು ತಿಳಿಸಿಕೊಡತಕ್ಕ ಕೇಸರಿ ಮತ್ತಾವ ದೇಶದಲ್ಲಿಯೂ ಜನಿಸಿರಲಿಕ್ಕಿಲ್ಲ.

ಬಂಧುಗಳೇ, ಇದೇ ಅಭಿಮಾನದಿಂದ ನಾನೂ ಈ ಪುಸ್ತಕವನ್ನು ರಚಿಸಿದ್ದೇನೆ. ಆದ್ದರಿಂದ ಇದರ ಉದ್ದೇಶವನ್ನು ತಿಳಕೊಂಡು ಓದಲಿಚ್ಛಿಸುವ ಸಕಲರಿಗೂ ಆಭಾರಿಯಿದ್ದೇನೆ. ಹಾಗೂ ಈ ಲೇಖನಕ್ಕೆ ಮುನ್ನುಡಿಯನ್ನು ಬರೆದು ಕೊಟ್ಟ ಶ್ರೀಮಾನ ಲಿಂಗನಗೌಡಾ ಪಾಟೀಲರಿಗೂ, ಮತ್ತು ಸಕಾಲದಲ್ಲಿ ಮುದ್ರಣವನ್ನೊದಗಿಸಿ ಕೊಟ್ಟು ಪುಸ್ತಕದ ಎಲ್ಲ ಖರ್ಚನ್ನು ವಹಿಸಿಕೊಂಡು ಪ್ರೋತ್ಸಾಹಿಸಿದ, ಹಿರಿಯರಾದ ಶ್ರೀಮಾನ ಚೌಗುಲೆಯವರಿಗೂ ಅನಂತ ಧನ್ಯವಾದಗಳನ್ನರ್ಪಿಸುತ್ತೇನೆ. ಶ್ರೀಮಾನ ಚೌಗುಲೆಯವರ ಕೃಪೆಯಿಂದ ಬೆಳಕಿಗೆ ಬಂದ ಪುಸ್ತಕಕ್ಕಾಗಿ, ಅವರಿಗೆ ಎಷ್ಟು ಧನ್ಯತೆಗಳನ್ನರ್ಪಿಸಿದರೂ ಕಡಿಮೆಯೇ ಸರಿ

ಪಿ. ವಿಜಯಕುಮಾರ.

ॐ ! नमामि सिद्धेशम् । विश्वम्भर-करूणाकर-मूर्तिम् ।
वन्दे त्रैलोक्यनाथम् । आर्यं भारत सम्राटेश्वर-सद्गुरूम् ॥
यस्य प्रसादेन देवाः । लभन्ते च भवान्ति सन्तुष्टाः ।
तस्मात् श्री गुरूदेवाय । प्रार्थयामि, लभेत् भारतः जयमङ्गलम् ।
इदं पुस्तकं गुरू सिद्धेश्वरस्य । च भारतीय-वीरस्य चरणे ।
समर्पयामि अपि प्रार्थयामि । "यतो धर्मस्ततो विजयः" ॥

छात्रः विजयकुमारः

# ಬಲಿದಾನ

೧

ಭರತ ಖಂಡದಲ್ಲಿ ಮಾನ್ಯವಾಗಿರುವ ಮೇವಾಡ ದೇಶವು ಎಲ್ಲರಿಗೂ ಗೊತ್ತೇ ಇದೆ. ದಿಲ್ಲಿಯಲ್ಲಿ ಅವರಂಗಜೇಬ ಬಾದಶಹನು ಆಳುತ್ತಿದ್ದಾಗ, ಮೇವಾಡದಲ್ಲಿ ಮಹಾರಾಣಾ ಶಾರ್ದೂಲ ಸಿಂಹನೆಂಬ ರಾಣನು ಆಳುತ್ತಿದ್ದನು. ಆಗಿನ ಕಾಲದ ಎಲ್ಲ ಹಿಂದೂ ರಾಜರೂ ಬಾದಶಹನಿಗೆ ಮಾಂಡಲೀಕರಾಗಿ ಆಳುತ್ತಿದ್ದರು. ಅಂತಹವರಲ್ಲಿ ಈ ಶಾರ್ದೂಲಸಿಂಹನೂ ಒಬ್ಬನಾಗಿದ್ದನು.

ಒಂದು ದಿವಸ ತನ್ನ ಭವ್ಯವಾದ ಅರಮನೆಯಲ್ಲಿ ಮಹಾರಾಣಾನೊಬ್ಬನೇ ಕುಳಿತು, ಏನನ್ನೋ ಯೋಚಿಸುತ್ತಲಿದ್ದಾನೆ. ಮನವೇಕೋ ಖಿನ್ನವಾಗಿದೆ. ಬಾಯಿಯಲ್ಲಿ ಏನೋ ಬಡಬಡಿಸುತ್ತಿದ್ದನು. ಮೇಜಿನ ಮೇಲಿಟ್ಟ ಕಾಗದವನ್ನು ಮತ್ತೊಮ್ಮೆ ನೋಡಿದನು. ಅದು ದಿಲ್ಲಿಯಿಂದ ಅವರಂಗಜೇಬ ಬಾದಶಹನಿಂದ ಬಂದಿತ್ತು. "ನಿಮ್ಮ ಸುಕುಮಾರಿ ಲೀಲಾದೇವಿಯನ್ನು ತನಗೆ ಕೊಡಬೇಕೆಂತಲೂ, ಇಲ್ಲವಾದರೆ ನಿಮ್ಮನ್ನು ಬಂಧಿಸಿ, ನಿಮ್ಮ ರಾಜ್ಯವನ್ನು ಸ್ಮಶಾನವನ್ನಾಗಿ ಮಾಡಬಹುದು." ಎಂದು ಪತ್ರವನ್ನು ಕಳುಹಿದ್ದನು. ಈ ವರ್ತಮಾನವು ತನ್ನ ಮಗಳಿಗೆ ತಿಳಿದರೆ, ಜೀವದಿಂದ ಕೂಡ ಉಳಿಯುವಳೋ ಇಲ್ಲವೋ ಎಂಬ ಸಂದೇಹವು ಅವನಿಗಿತ್ತು. ಆದ್ದರಿಂದ ಈ ಸುದ್ದಿಯು ಆದಷ್ಟು ಮಟ್ಟಿಗೆ ತಿಳಿಸದೇ, ಗುಪ್ತತನದಿಂದ ಕೆಲಸ ಸಾಗಿಸಬೇಕೆಂಬ ವಿಚಾರ ಮಾಡಿದ್ದನು. ಆದರೆ ಚಾಣಾಕ್ಷಳಾದ ರಾಣಿ

ಕಲಾವತಿಗೆ ಇದು ತಿಳಿಯದೇ ಇರಲಿಲ್ಲ. ಆದ್ದರಿಂದ ಈ ಪ್ರಸ್ತಾಪವನ್ನು ತೆಗೆಯಬೇಕೆಂದು ರಾಣನೆಡೆಗೆ ಬಂದಳು.

ಮಹಾರಾಣಾನು ತನ್ನ ಪಟ್ಟದರಸಿಯನ್ನು ನೋಡಿ ಸ್ವಲ್ಪ ಆನಂದವಾದರೂ, ಕೂಡಲೆ ಮುಖ-ಚರ್ಯೆಯು ಉದಾಸೀನವಾಗಿ ಬಿಟ್ಟಿತು. ಅದನ್ನು ರಾಣಿಯು ನೋಡಿ “ದೇವ, ಇಂದು ತಮ್ಮ ಮುಖದಲ್ಲಿ ಗಂಭೀರತೆಯ ಬದಲಾಗಿ ಉದಾಸೀನದ ಛಾಯೆಯು ಬಂದು ಬಿಟ್ಟಿವೆ. ಏನಾದರೂ ವಿಶೇಷವೇ ?” ಆಗ ಮಹಾರಾಣಾನು ಸಂಕೋಚದಿಂದ “ಮಹಾರಾಣೀ, ಅವರಂಗಜೇಬನ ಕಾಟವು ಬಹಳೇ ಆಯಿತು. ಅವನಿಂದ ಎಲ್ಲ ಹಿಂದೂ ರಾಜ್ಯಗಳು ಮುಣಗಿ, ನಮ್ಮ ಸ್ತ್ರೀಯರ ಮಾನವೇ ಇಲ್ಲದಾಯಿತು. ಇಲ್ಲಿಯತನಕ ಮೇವಾಡದ ಕಾಟವು ತಪ್ಪಿತ್ತು. ಆದರೆ ಅದೂ ಇಂದಿಗೆ ತೀರೀತು. ಬಾದಷಹನು ಇಂದು ನಮ್ಮ ಮೇಲೆಯೂ ಹೊರಳಿದನು “ಮಹಾರಾಜ ಇದರಲ್ಲಿ ಕೆಟ್ಟದ್ದಾವರೂ ಏನು? ಯಾವ ರಾಜರು ತಮ್ಮ ಮಗಳನ್ನು ಬಾದಷಹನಿಗೆ ಕೊಟ್ಟಿಲ್ಲವೇ? ಕೇವಲ ನಮ್ಮ ಮಗಳ ಸಲುವಾಗಿ, ರಾಜ್ಯವನ್ನು ಸಂಕಟದಲ್ಲಿ ನೂಕುವದು ಬೇಡ.”

ಶಾರ್ದೂಲ ಸಿಂಹ— “ಆದರೆ ನನ್ನ ಮಗಳನ್ನು ಆ ಯವನನಿಗೆ ಕೊಟ್ಟು ರಜಪೂತ ಕುಲಕ್ಕೆ ಕಲಂಕವನ್ನು ಹಚ್ಚಲಿಯಾ? ಆಗದು. ಇದು ತ್ರಿಕಾಲದಲ್ಲಿಯೂ ಆಗದು.”

ಕಲಾವತಿ— “ನಾಥ, ತಾವು ಬಾದಷಹರ ಮಾಂಡಲೀಕರೆಂಬದನ್ನು ಮರೆತಂತೆ ಕಾಣುತ್ತದೆ. ಕೇವಲ ನಮ್ಮ ಮಗಳ ಸಲುವಾಗಿ ಸಮಸ್ತ ರಜಪೂತರನ್ನು ಬಲಿಗೊಡುವದು ಬೇಡ. ಲೀಲೆಯು ನನ್ನ ಆಜ್ಞೆಯ ವಿರುದ್ಧ ಎಂದೂ ಹೋಗಲಾರಳು! ಆಕೆಯನ್ನು ಒಪ್ಪಿಸುವದು ನನ್ನ ಮೇಲಿದೆ.”

ಶಾರ್ದೂಲ ಸಿಂಹನು ಈ ಮಾತಿಗೆ ಸುಮ್ಮನೆ ಕುಳಿತನು. ಅಷ್ಟರಲ್ಲಿ ಸೇವಕನೊಬ್ಬನು ಬಂದು "ಮಹಾರಾಣಾ ಮಂತ್ರಿವರರು ಬಂದಿದ್ದಾರೆ ರಾಜ ಸಭೆಗೆ ಬರಬೇಕು." ಎಂದು ಹೇಳಿ ಹೊರಟನು. ಆಗ ರಾಣನು ಎದ್ದು "ದೇವಿ ಒಂದು ವೇಳೆ ಲೀಲೆಯು ಒಪ್ಪಿದರೂ ಆಕೆಯ ಅಣ್ಣನು ಒಪ್ಪಲಿಕ್ಕೆ ಬೇಕು. ನಿನಗೆ ಹೇಗೆ ಸಮ್ಮತವಹುದೋ ಹಾಗೆ ಮಾಡು" ಎಂದು ಹೇಳಿ ಹೊರಟು ಹೋದನು.

## ೨

ರಾಜ-ಕುಮಾರ ರಮೇಶನೂ, ಅವನ ಬಾಲ್ಯ ಮಿತ್ರ ರಾಜಶೇಖರನು ಕೂಡಿ ಕುದುರೆಯ ಮೇಲಿಂದ, ಸಂಜೆಯ ವಾಯು ವಿಹಾರಕ್ಕಾಗಿ ನಡೆದಿದ್ದಾರೆ. ಇಬ್ಬರೂ ನಗುತ್ತ, ಕೆಲಿಯುತ್ತ, ಹೊರಟಿದ್ದಾರೆ. ಆಗ ರಮೇಶನು " ರಾಜಶೇಖರ, ಮಾನವನು ಜನಿಸಿವುದು ಕೇವಲ ತನ್ನ ದೇಶದ ಕಲ್ಯಾಣಕ್ಕಾಗಿ. ಆದರೆ ಎಲ್ಲವನ್ನು ಮರೆತು ಈ ನಮ್ಮ ಹಿಂದೂಗಳು ಎಷ್ಟು ಸ್ವಾರ್ಥರಾಗಿದ್ದಾರೆ" ಎನ್ನಲು ರಾಜಶೇಖರನು " ಹಾಗಾದರೆ ರಾಜಕುಮಾರ, ಈ ಜನರು ಎಂದು ಜಾಗೃತರಾದಾರು ? ಯವನರ ಅತ್ಯಾಚಾರವು ಹೀಗೆಯೇ ನಡೆಯುತ್ತ, ಹೋದರೆ, ಹಿಂದೂಗಳ ಗತಿಯೇನು? " ರಾಜಕುಮಾರನು ನಸುನಕ್ಕು "ಶೇಖರಾ, ಅದನ್ನೇ ನಾವೀಗ ಮಾಡಬೇಕಾಗಿದೆ. ನಮ್ಮ ಜೀವನದ ಹೆಗ್ಗುರಿಯು ಅದನ್ನೇ ಇಟ್ಟುಕೊಳ್ಳಬೇಕಾಗಿದೆ." ಈ ಮಾತಿಗೆ ರಾಜಶೇಖರನು " ರಮೇಶಾ, ಈ ಬಾದಶಹನ ಅತ್ಯಾಚಾರಕ್ಕೆ ತಲೆಬಾಗಿಸದ ವೀರನೊಬ್ಬನು ಇಲ್ಲಿಯೇ ನಮ್ಮ ದೇಶದ ನೆರೆಯ ರಾಣನೊಬ್ಬನಿದ್ದಾನೆ. ಆ ಮಹನೀಯನ ಹೆಸರು ಜೋರಾವರಸಿಂಹ ಎಂದು ಇರುತ್ತದೆ. ಈ ನಮ್ಮ ಕಾರ್ಯವು, ಅವನಿಂದ ಸಹಾಯವನ್ನು ಪಡೆಯಿ

ತೆಂದರೆ, ಯಶಸ್ವಿಯಾಯಿತೆಂದೇ ತಿಳಿ ” ಎಂದನು. ಅದಕ್ಕೆ ರಾಜ ಕುಮಾರನು ಆನಂದದಿಂದ ನಕ್ಕು, ಅವನ ಬೆನ್ನ ಮೇಲೆ ಕೈಯಾಡಿಸಿ “ ಹಾಗಾದರೆ ಈಗಲೇ ನಡೆ. ರಾಜೂ, ಪರಿಸ್ಥಿತಿಯು ವಿಪರೀತಕ್ಕೇರಿದೆ. ಆದ್ದರಿಂದ ವಿಲಂಬ ಮಾಡಿ ಉಪಯೋಗವಿಲ್ಲ. ಹೇಗಾದರೂ ಕುದುರೆಗಳಿವೆ. ನಾಳೆ ಮಧ್ಯಾಹ್ನದೊಳಗಾಗಿ ಬೇಕಾದ ಹಾಗೆ ಮುಟ್ಟಬಹುದು. ” ಎಂದು ಕುದುರೆಯನ್ನು ಹಿಡಿಸಿದರು.

ಬೆಳಗಿನ ಜಾವ ನಾಲ್ಕುವರೆ ಗಂಟೆಯಾಗಿರಬಹುದು. ಇಬ್ಬರೂ ಒಂದು ಗಿಡದ ಕೆಳಗೆ ಮಲಗಿದ್ದಾರೆ. ರಾಜಶೇಖರನೊಬ್ಬನೇ ಎಚ್ಚತ್ತಿದ್ದಾನೆ. ಅಷ್ಟರಲ್ಲಿ ಕುದುರೆಗಳ ಕಾಲಿನ ಸಪ್ಪಳವು ಅವನಿಗೆ ಕೇಳಹತ್ತಿತು. “ ಇಷ್ಟು ಬೇಗನೇ ಮೇವಾಡದ ಕಡೆಗೆ ಯಾರು ನಡೆದಿರಬಹುದು ? ” ಎಂದು ಎದ್ದು ಗಿಡದ ಮೇಲೆ ಹತ್ತಿ ಸಪ್ಪಳ ಬರುತ್ತಿರುವ ಕಡೆಗೆ ನೋಡಹತ್ತಿದನು. ಆಗ ಅವನಿಗೆ ಎಂಟು ಜನ ಮುಸಲ್ಮಾನ ರಾಹುತರು ಕಾಣಿಸಹತ್ತಿದರು. ಅವರೆಲ್ಲರೂ ಸಮವಸ್ತ್ರಗಳನ್ನು ಧರಿಸಿಕೊಂಡಿದ್ದರು. ಆದರೆ ಒಬ್ಬನು ಮಾತ್ರ ರಾಜ ಠೀವಿಯಿಂದ ಮೆರೆಯುತ್ತಿದ್ದನು. ಆತನು ಬಾದಶಹನ ಸೇನಾಪತಿ ಅಕಬರಖಾನನು.

ಇವರನ್ನು ದೂರದಿಂದ ನೋಡಿದ ರಾಜಶೇಖರನು ಕೆಳಗಿಳಿದು ರಮೇಶನನ್ನು ಎಬ್ಬಿಸಹತ್ತಿದನು. ಆದರೆ ಗಾಢ ನಿದ್ರೆಯಲ್ಲಿದ್ದ ರಮೇಶನಿಗೆ ಏಳುವದಾಗಲಿಲ್ಲ. ಆದ್ದರಿಂದ ಎಬ್ಬಿಸುವದು ತರವಲ್ಲೆಂದು ತಿಳಿದು ಅವರ ಮಾತುಗಳನ್ನು ಕೇಳಬೇಕೆಂದು ಬರುತ್ತಿದ್ದ ಹಾಗೆ ಕಿವಿಗೊಟ್ಟು ಕೇಳಹತ್ತಿದನು. ಆಗ ಅವರಲ್ಲಿ ಒಬ್ಬನು “ ಖಾನಸಾಹೇಬರೇ ಆ ರಾಜಕುಮಾರಿಯನ್ನು ಹಿಡಿದು ತರುವಾಗ ಯಾರಾದರೂ ಬಂದು ನಿಮ್ಮನ್ನು ಅಡ್ಡಗಟ್ಟಿದರೆ ? ” ಈ

ಮಾತಿಗೆ ಆ ಖಾನನು ಗಹಗಹಿಸಿ ನಗುತ್ತ " ಅದಾವ ಶೂರನಿರುವನೋ, ಮೇವಾಡದಲ್ಲಿ? ಆ ಮಹಾರಾಣಾ ಶಾರ್ದೂಲಸಿಂಹನ ಒಪ್ಪಿಗೆ ಮಾತ್ರ ಸಿಕ್ಕರೆ ಸಾಕು. ಆ ಮೇಲೆ ನಮ್ಮ ಸೈನ್ಯವು ಸಿದ್ಧವಿದೆಯೇ " ಅಲ್ಲ ಈ ಮಾತುಗಳನ್ನು ಕೇಳಿದ ಕೂಡಲೇ ರಾಜಶೇಖರನ ಹೃದಯವು ಕಂಪಿಸಿತು. ಒಮ್ಮೆಲೇ ಸಹಸ್ರಾರು ಬಾಣಗಳು ನಟ್ಟು ವ್ಯಥೆಯಾಗಹತ್ತಿತು." "ರಾಜಕುಮಾರಿಯನ್ನು ಒಯ್ಯಲು ಈ ನೀಚರು ನಡೆದಿರುವರೇ? ರಮೇಶನಿಗೆ ಈ ಸಂಗತಿಯನ್ನು ನಾನು ಹೇಗೆ ತಿಳಿಸಲಿ? ಏನಾದರೂ ಆಗಲಿ. ಇವರ ಸಮಾಚಾರವನ್ನು ನಾನೇ ತೆಗೆದುಕೊಳ್ಳುವೆನು" ಎಂದು ಆಲೋಚಿಸಿ ಒಮ್ಮೆಲೇ ಅವರೆದುರಿಗೆ ನಿಂತುಕೊಂಡೆನು. ಹೀಗೆ ಒಮ್ಮೇಲೆ ಬಂದು ನಿಂತ ಆ ತರುಣರನ್ನು ನೋಡಿ, ಖಾನನು ವಿಸ್ಮಯಗೊಂಡು " ಎಲೇ ಪೋರಾ, ಹೀಗೇಕೆ ಒಮ್ಮೆಲೇ ಅಡ್ಡ ಬಂದು ನಿಂತಿರುವೆ? ದಾರಿಯನ್ನು ಬಿಡು" ಎಂದು ಗದ್ದರಿಸಿದನು. ಆದರೆ ಇದಕ್ಕೆ ಅಂಜದೆ ಆ ವೀರನು " ಖಾನಾ, ನೀನು ಯಾವ ದಾರಿಯಿಂದ ಬಂದಿರುವೆಯೋ, ಹಾಗೆಯೇ ಹೊರಳು ಮುಂದೆ ಒಂದು ಹೆಜ್ಜೆ ಇಟ್ಟರೆ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ" ಎನ್ನಲು ಖಾನನು ತಿರಸ್ಕಾರದಿಂದ ನಗುತ್ತ ದಾಡಿಯ ಮೇಲೆ ಕೈಯನ್ನಾಡಿಸಿ " ವೀರಾ, ನಾವು ಸುಮ್ಮನೇ ಹೊರಳಲು ಬಂದವರಲ್ಲ. ನಾವು ರಾಜಕುಮಾರಿಯನ್ನು..... ...." ಎಂದು ಮಾತಾಡುವದರೊಳಗಾಗಿಯೇ ರಾಜಶೇಖರನು " ಪರದೇಶದಿಂದ ಬಂದು ನಾರಿಯರಿಗೆ ಕೈ ಇಕ್ಕುತ್ತಿರುವ ನೀಚರಿರಾ, ಆ ರಾಜಕುಮಾರಿಯು ಎಂದೂ ನಿಮ್ಮ ವಶವಾಗುವವಳಲ್ಲ" ಎನ್ನಲು ಖಾನನು ಸಿಟ್ಟಿನಿಂದ ಬಂಧಿಸಲು ಆಜ್ಞೆಯನ್ನಿತ್ತನು. ಆಗ ರಾಜಶೇಖರನೂ ಒರೆಯಲ್ಲಿರುವ ತನ್ನ ಖಡ್ಗವನ್ನು ತೆಗೆದು ಹೋರಾಡಲಾರಂಭಿಸಿದನು. ಆದರೆ ಆ ಏಳು ಜನ ವೀರರೊಂದಿಗೆ ಈ ನಮ್ಮ ಧೀರನು ಎಷ್ಟು ಕಾಲಗಳವರೆಗೆ ಹೋರಾಡ

ಒಲ್ಲದು. ಈ ನಡೆದಿರುವ ಖಡ್ಗದ ಝಂಕಾರಕ್ಕೆ ರಾಜಕುಮಾರನು ಎಚ್ಚರಾಗಿ, ಯವನರ ಕೂಡ ಬಡಿದಾಡುತ್ತಿರುವ ತನ್ನ ಮಿತ್ರನನ್ನು ಕಂಡು, ತಾನೂ ಖಡ್ಗವನ್ನು ತಗೊಳ್ಳುವಷ್ಟರಲ್ಲಿ, ರಾಜಶೇಖರನು ಗಾಯಾಳುವಾಗಿ ಬಿದ್ದು ಬಿಟ್ಟನು. ಆಗ ಆ ರಾಹುತರು ಇವನನ್ನು ಬಂಧಿಸುವ ಗೋಜಿಗೆ ಹೋಗದೆ ಹಾಗೆಯೇ ನಡೆದು ಬಿಟ್ಟರು. ಕೂಡಲೇ ರಾಜಶೇಖರನು ಎದ್ದು ರಮೇಶನಿಗೆ “ ಪ್ರಭೋ, ಅಲ್ಲಿ ಹೋಗುತ್ತಿರುವ ಮುಸಲ್ಮಾನ ರಾಹುತರು ರಾಜಕುಮಾರಿಯನ್ನು ಒಯ್ಯಲು ನಡೆದಿದ್ದಾರೆ. ಆದ್ದರಿಂದ ಈಗ ವೇವಾಡಕ್ಕೇನೇ ನಡೆಯಿರಿ. ” ಎಂದು ಇಬ್ಬರೂ ಕುದುರೆಯನ್ನು ಹೊರಳಿಸಿದರು. ಆಗ ರಾಜಕುಮಾರನು “ ಬಾದಶಹಾ, ನೀನು ಅನೇಕರನ್ನು ಗೆದ್ದು ಸ್ತ್ರೀಯರನ್ನು ವಶಮಾಡಿಕೊಂಡಿರುವೆ. ಆದರೆ ಈ ಸಲ ಲೀಲಾದೇವಿಯಿಂದ ಪರಾಭೂತನಾಗುವೆ. ”

೩

ಲೀಲಾದೇವಿಯು ತನ್ನ ಸಖಿ, ರಾಜಶೇಖರನ ಪತ್ನಿ, ಚಂಪಾದೇವಿಯನ್ನು ಕರಕೊಂಡು ಮಹಡಿಯ ಮೇಲೆ ಕುಳಿತಿದ್ದಾಳೆ. ಕಳೆದ ರಾತ್ರಿ ತನ್ನ ತಾಯಿಯಿಂದ ಸಮಾಚಾರವು ತಿಳಿದು ಆಕೆಯ ಮನವು ಖಿನ್ನವಾಗಿತ್ತು. ಚಂಪಾದೇವಿಯು ಎಷ್ಟು ಸಮಾಧಾನ ಹೇಳಿದರೂ, ಆಕೆಗೆ ಉತ್ಸಾಹ ಬರಲಿಲ್ಲ. ಕಡೆಗೆ ಚಂಪೆಯು “ ಲೀಲೆ, ನನ್ನ ಮಾತನ್ನು ನೀನು ಕೇಳುವದಿಲ್ಲವೇ ? ಒಂದು ವೇಳೆ ನಿನ್ನ ಮಾನ ಹೋಗುವ ಪ್ರಸಂಗವು ಬಂದರೆ, ನಿನ್ನ ಬದಲಾಗಿ ನಾನು ಕತ್ತಿಯನ್ನು ಧರಿಸುತ್ತೇನೆ. ಆಗ ನಿನ್ನಣ್ಣನೂ, ನನ್ನ ಪತಿಯೂ, ಬೇಕಾದರೆ ರಕ್ಷಿಸಲಿ, ಇಲ್ಲವೆ ಬಿಡಲಿ. ” ಎನ್ನಲು ಲೀಲೆಗೆ ಸ್ವಲ್ಪ ಆನಂದವಾಗಿ “ ಅಕ್ಕಾ, ಇದು ನಿಜವೇ ? ಹಾಗಾದರೆ ನಾನೇ ಧನ್ಯ ” ಎಂದು ಅವಳನ್ನು ಅಪ್ಪಿಕೊಂಡಳು. ಇಷ್ಟರಲ್ಲಿ ಇಬ್ಬರೂ ಕುದುರೆಗಳ ಸಪ್ಪಳ

ವನ್ನು ಕೇಳಿ ನೋಡಲು ಹೊರಗೆ ಬಂದರು. ಆಗ ಮುಸಲ್ಮಾನ ರಾಹುತರೂ, ಅವರ ಹಿಂದೆ ರಮೇಶ, ರಾಜಶೇಖರನು ಕಂಡು ಇಬ್ಬರ ಕಣ್ಣುಗಳಲ್ಲಿಯೂ ನೀರೂರಿದವು. ಇಷ್ಟೇ ಅಲ್ಲದೆ ತನ್ನ ತಂದೆಯು ಅವರ ಎದುರಿಗೆ ಹೋಗಿ ಅಪ್ಪಿಕೊಂಡ ಕೂಡಲೇ, ಲೀಲಾದೇವಿಯು, ಒಮ್ಮೆಲೇ ಮೂರ್ಛೆ ಹೋಗಿ ಅಲ್ಲಿಯೇ ಬಿದ್ದು ಬಿಟ್ಟಳು. ಇದನ್ನು ಕೆಳಗಿನಿಂದ ನೋಡಿದ ರಮೇಶನು, ರಾಜ ಶೇಖರನನ್ನು ಕರಕೊಂಡು ಮೇಲೆ ಬಂದನು.

ಆ ಮೇಲೆ ಕ್ಷಣ ಹೊತ್ತು ಕಳೆದನಂತರ ಲೀಲಾದೇವಿಯು ಶುದ್ಧಿಯ ಮೇಲೆ ಬಂದುದನ್ನು ನೋಡಿ ಅವನ ಎದೆಗೆ ಅಪ್ಪಿ ಕಣ್ಣೀರು ತರಹತ್ತಿದಳು. ಇವರಿಂದ ಕೋಮಲ ಹೃದಯದ ಅಣ್ಣ ನಿಗೂ ಬಹಳ ಕೆಡಕೆನಿಸಿತು. ಅವನಿಗೂ ದುಃಖದ ಕಾರಣವು ಗೊತ್ತಾಗಿ “ ತಂಗೀ ನಿನ್ನ ಹೃದಯದ ಕಳವಳವು ಎನಗೆ ಗೊತ್ತಾ ಗಿದೆ. ನಿನ್ನೆ ರಾತ್ರಿ ನಾನೂ, ರಾಜಶೇಖರನೂ ಮನೆಯಲ್ಲಿ ಇರಲಿಲ್ಲ ವಾದುದರಿಂದ, ನಮ್ಮ ಮೇಲೆ ಸಂಶಯವಿರಬಹುದು. ಆದರೆ ನಿಮ್ಮ ಅಬಲೆಯರ ಸಲುವಾಗಿ ಪ್ರಾಣವನ್ನೆರಚಲು ಸಿದ್ಧನಿರುವೆ ಯೆಂಬುದನ್ನು ಮಾತ್ರ ಹೇಳಬಲ್ಲೆನು.” ಆಗ ರಾಜಶೇಖರನು “ಲೀಲೇ ಕ್ಷತ್ರಿಯ ಹೆಂಗಸಳಾದ ನೀನು, ಪದ್ಮಿನಿ ಮಾತೆಯ ಹಾಗೆ ಧೈರ್ಯವನ್ನು ತಂದು, ಕೆಲಸವನ್ನು ಯಶಸ್ವಿ ರೀತಿಯಿಂದ ಪಾರು ಗಾಣಿಸು.” ಇಷ್ಟರಲ್ಲಿ ಶಾರ್ದೂಲಸಿಂಹನಿಂದ ಕರೆ ಬಂದದ್ದರಿಂದ ಇಬ್ಬರೂ ಖಾನನ ಭೆಟ್ಟಿಗೆ ಬರಬೇಕಾಯಿತು. ಆಗ ರಾಜಶೇಖರನು ಕೆಳಕ್ಕಿಳಿಯುತ್ತ “ ದೇವೀ, ವಿಷದ ಸರ್ಪವು ರಾಜಗೃಹಕ್ಕೇನೇ ಬಂದಿದೆ. ಅದರ ಹಲ್ಲು ಮುರಿಯುವವರೆಗೆ, ರಾಜಕುಮಾರಿ ಯನ್ನು, ಅವರ ಕಣ್ಣಿಗೂ ಕೂಡ ಬೀಳದಂತೆ ಇಡಿರಿ” ಎಂದು ಹೇಳಿ ಕೆಳಗೆ ಬಂದನು.

ಇತ್ತ ಆ ಖಾನನು ತನ್ನ ಜನರನ್ನು ಕೂಡಿಕೊಂಡು, ಮಹಾರಾಣಾನೊಂದಿಗೆ ಬಾದಶಹನ ವಿಷಯವನ್ನು ಹೇಳುತ್ತ ಕುಳಿತಿದ್ದನು. ಅಷ್ಟರಲ್ಲಿ ಇವರು ಬಂದದ್ದನ್ನು ರಾಣನು ನೋಡಿ "ಖಾನಸಾಹೇಬರೇ, ಇವನು ನನ್ನ ಜೇಷ್ಠಪುತ್ರ ರಮೇಶ ಹಾಗೂ ಇವನು ಬಾಲ್ಯ-ಮಿತ್ರ ರಾಜಶೇಖರ ಎಂದು ಪರಿಚಯ ಮಾಡಿಕೊಟ್ಟನು. ರಾಜಶೇಖರನನ್ನು ಕಂಡ ಕೂಡಲೇ, ಖಾನನು ಉದ್ವಿಗ್ನನಾದನು. ಆಗ ರಾಣನನ್ನುದ್ದೇಶಿಸಿ " ಮಹಾರಾಣಾ, ಇಂತಹ ಬದ್ಮಾಷರನ್ನು ನೀವು ಇಟ್ಟುಕೊಂಡು, ನಮ್ಮ ಬಾದಶಹರ ಸಿಂಹಾಸನಕ್ಕೆ ಅಪಮಾನವನ್ನು ಮಾಡುತ್ತೀರಿ " ಎಂದನು. ಆಗ ರಾಜಶೇಖರನೂ ದಿಟ್ಟತನದಿಂದ "ಖಾನಸಾಹೇಬ, ಇಂತಹ ದರ್ಪೋಕ್ತಿಗಳಿಗೆ ನಾವು ಅಂಜುವವರಲ್ಲ. ಇಂತಹ ಯಾವ ಕೃತಿಯಿಂದ ನಿಮ್ಮ ಬಾದಶಹರ ಸಿಂಹಾಸನಕ್ಕೆ ಅಪಮಾನವಾಯಿತೆಂಬದನ್ನು ತಿಳಿಸಬೇಕು" ಎಂದನು. ಈ ಮಾತಿಗೆ ಖಾನನು ಸ್ವಲ್ಪ ಅಂಜಿ ಮನಸ್ಸಿನಲ್ಲಿಯೇ "ಇವನನ್ನು ಮೋಸದಿಂದಲೇ ಬಂಧಿಸಿ, ಬಾದಶಹರ ಎದುರಿಗೆ ನಿಲ್ಲಿಸಬೇಕು" ಎಂದು ಮಹಾರಾಣಾನಿಗೆ "ಮಹಾರಾಣಾ ನಾವೀಗ ಸ್ವಲ್ಪ ದಣಿದದ್ದರಿಂದ, ವಿಶ್ರಾಂತಿಗಾಗಿ ಸ್ಥಳವನ್ನು ಕೊಡಬೇಕು " ಎನ್ನಲು, ರಾಣನು ಅವರನ್ನು ನಗೆಮುಖದಿಂದ ಒಪ್ಪಿಸಿ "ಖಾನಸಾಹೇಬರೇ, ನಿಮ್ಮ ಸಲುವಾಗಿ ಒಂದು ಬೇರೆ ಮನೆಯನ್ನೇ ಕೊಡುವೆನು. ಅಲ್ಲಿಯತನಕ ನಮ್ಮ ಮಹಡಿಯ ಮೇಲಿನ ಕೋಣೆಯಲ್ಲಿ ನಿಶ್ಚಿಂತೆಯಿಂದ ಕಾಲ ಕಳೆಯಬಹುದು" ಎಂದು ಕರಕೊಂಡು ನಡೆದನು.

ಇದೆಲ್ಲವೂ ಆಕಸ್ಮಿಕ ಘಟನೆಯು ನಡೆದದ್ದರಿಂದ ಮೇಲೆ ಕುಳಿತ ಲೀಲಾದೇವಿಗೂ, ಚಂಪಾದೇವಿಗೂ, ಇವರು ಬರುತ್ತಿರುವ ಸುದ್ದಿಯು ತಿಳಿಯಲಿಲ್ಲ. ಇದರಿಂದ ಮೇಲೆ ಬಂದಂಥ ಆ

ಖಾನನು ಒಮ್ಮೆಲೇ ರಾಜಕುಮಾರಿಯನ್ನು ಕಂಡು ಮನಸ್ಸಿನಲ್ಲಿ "ಅಹಹಾ, ಹಿಂದೂ ರಮಣಿಯರಲ್ಲಿ ಅವರ ವಿಧಾತನು, ಇಷ್ಟು ಸೌಂದರ್ಯವನ್ನು ಕಳುಹಿಸಿಕೊಟ್ಟಿರುವನೇ" ಎಂದು ಉದ್ಗಾರ ತೆಗೆದನು. ರಾಣನು, ಎಲ್ಲರನ್ನು ಕರಕೊಂಡು ಹೋದರೂ, ಅವರ ಪರಿವೆಯೇ ಅವನಿಗಿದ್ದಿಲ್ಲ. ನಂತರ ರಾಜಶೇಖರನು ಹಿಂದಿನಿಂದ ಬಂದು, ಅವರನ್ನು ತಿವಿದು "ಖಾನರೇ, ಹಾದಿಯಲ್ಲಿ ತಮ್ಮನ್ನು ತಡೆವಿದ್ದರ ಪರಿಣಾಮವಾಗಿ, ಬಾದಶಹರ ಸಿಂಹಾಸನಕ್ಕೆ ಅವಮಾನವು ತಗಲಿತು. ಆದರೆ ಈಗ ನಡೆಸಿರುವ ಅಪಮಾನವು ಯಾರಿಗೆ ?" ಎಂದು ಗದ್ದರಿಸಲು ಆ ಖಾನನು "ಓ! ರಾಜಶೇಖರ: ಆದರೆ ಈಕೆಯನ್ನು ಒಯ್ಯಲಿಕ್ಕಾಗಿಯೇ, ನಾವು ಇಲ್ಲಿಗೆ ಬಂದಿರುವೆವು" ಎಂದವನೇ ಒಳಗೆ ಹೋಗಿ ಬಿಟ್ಟನು.

೪

ಮೇವಾಡದ ನೆರೆಯ ದೇಶದ ಮಹಾರಾಣಾ ಜೋರಾವರ ಸಿಂಹನು ಅರಮನೆಯಲ್ಲಿ ಕುಳಿತಿದ್ದಾನೆ. ಮೇವಾಡದ ರಾಜಕುಮಾರಿ ಲೀಲಾದೇವಿಯನ್ನು ಒಯ್ಯಲು, ದಿಲ್ಲಿಯ ಅವರಂಗಜೇಬ ಬಾದಶಹನಿಂದ, ಜನರು ಬಂದಿರುವದನ್ನು ತನ್ನ ಗುಪ್ತದಾರರಿಂದ ತಿಳಿದು ಅವನಿಗೆ ಬಹಳ ಖೇದವಾಯಿತು. "ಹಿಂದೂಗಳಲ್ಲಿ ತಮ್ಮ ಕುಲದ ಅಭಿಮಾನವು ಕೂಡ ಮರೆತು ಹೋಯಿತಲ್ಲ! ಇಷ್ಟು ಜಾಣನಾದ ಶಾರ್ದೂಲ ಸಿಂಹನು ತನ್ನ ಮಗಳನ್ನು ಮಾರಲು ಹೇಗೆ ಒಪ್ಪಿದನು?" ಎಂಬ ವಿಚಾರದಿಂದ ಅವನ ಕಣ್ಣಲ್ಲಿ ನೀರೂರ ಹತ್ತಿದವು. "ಹೇಗಾದರೂ ಮಾಡಿ ಆಕೆಯನ್ನು ಉಳಿಸಲೇಬೇಕು. ಈ ಕಾರ್ಯಕ್ಕಾಗಿ ವಿಜಯ ಕುಮಾರನನ್ನು ಕಳುಹಿಸಲೇ ಬೇಕು." ಎನ್ನುವಷ್ಟರಲ್ಲಿ ವಿಜಯನು ಬಂದು ನಮಸ್ಕರಿಸಿ "ಮಹಾರಾಣಾರವರ ಸೇವೆಗೆ ಹಜರಿದ್ದೇನೆ" ಎಂದನು. ಆಗ ಮಹಾರಾಣಾನು ಎದ್ದು, ಅವನ ಕೈ

ಹಿಡಿದು "ವಿಜಯಾ, ಇಲ್ಲಿಯವರೆಗೆ ನನ್ನ ಸೇವೆಯನ್ನು ನೀನು ತಪ್ಪದೇ ಮಾಡುತ್ತ ಬಂದಿರುವೆ. ನನ್ನ ರಾಜ್ಯದ ಸಕಲ ವೈಭವದ ಯಶಸ್ಸು ನಿನ್ನನ್ನೇ ಕೂಡಿದೆ. ಆದರೆ ..." ಎಂದು ನಿಂತನು. ಆಗ ವಿಜಯನು ಉತ್ಕಂಠತೆಯಿಂದ "ಏನು ರಾಣಾ, ಅಲ್ಲಿಯೇ ನಿಂತು ಬಿಟ್ಟಿರಲ್ಲ. ಏನಾದರೂ ಅನರ್ಥವೇ?" ಆಗ ರಾಣನು "ವಿಜಯಾ, ಸರ್ವ ರಜಪೂತರಿಗೂ ಅಳುಕಿಸಲಾಗದ ಕಲಂಕವೊಂದು ಬಂದಿದೆ. ಅದಕ್ಕಾಗಿ ನಾವಿಂದು ಹೋರಾಡಲೇ ಬೇಕಾಗಿದೆ" ಎಂದು ಮೇವಾಡದ ಪರಿಸ್ಥಿತಿಯನ್ನು ತಿಳಿಸಿದನು. ಈ ಸಂಗತಿಯಿಂದ ರಜಪೂತ ಕುಲಾಭಿಮಾನಿಯಾದ ವಿಜಯನ ಮನಸ್ಸು ಉದ್ವಿಗ್ನಗೊಂಡು "ಮಹಾರಾಣಾ ಇದಕ್ಕಾಗಿ ತಾವು ಚಿಂತಿಸಕೂಡದು. ಈ ಕಾರ್ಯಕ್ಕಾಗಿ ನಾಳೆಯೊಳಗಾಗಿ ನಾನು ಹೊರಡುವೆನು. ಅನುಮತಿಯನ್ನು ಕೊಡಬೇಕು. ಆಗ ಜೋರಾವರನು "ಆಗಲಿ ವಿಜಯಾ, ಆದರೆ ಒಮ್ಮೆಲೇ ದುಡುಕಬೇಡ ಅಲ್ಲಿ ಹೋದ ಬಳಿಕ, ನಡೆದ ಘಟನೆ ತಿಳಕೊಂಡು, ಶಾಂತ ಮನಸ್ಸಿನಿಂದ ವಿಚಾರಮಾಡಿ, ಮುಂದಿನ ಕೆಲಸಕ್ಕೆ ಕೈಹಾಕು." ಎಂದು ಅನುಮತಿಯನ್ನು ಕೊಟ್ಟು ಆಶೀರ್ವದಿಸಿದನು.

ಇನ್ನು ಇತ್ತ ರಾಜ ಕುಮಾರಿಯು ಪರಿಸ್ಥಿತಿಯು ಬಗ್ಗೆ ವಿಚಾರ ಮಾಡೋಣ. ಆ ನಂತರ ರಾಜದೂತನಾದ ಅಕಬರಖಾನನು ಅಂತಹ ಮಾತುಗಳನ್ನಾಡಿದ ಕೂಡಲೇ, ದುಃಖದಿಂದ ಎದ್ದು ಒಳಗೆ ಜಗುಲಿಯ ಹತ್ತಿರ ಭಗವಾನ ಏಕನಾಥಲಿಂಗಜಿಯ ಬಳಿಗೆ ಬಂದು ಮೊಳಕಾಲೂರಿ "ಪರಮಾತ್ಮಾ ನೀನು ನಿಜವಾಗಿಯೂ ಭಕ್ತರ ಅಡಿಯಾಳಾಗಿದ್ದರೆ, ನನ್ನ ಮಾನವನ್ನುಳಿಸು. ಇಲ್ಲದಿದ್ದರೆ ನನಗೆ ಇದರ ಹೊರ್ತು ಗತಿಯಿಲ್ಲ" ಎಂದು ಸಣ್ಣ ಬರ್ಚಿಯನ್ನು ತೆಗೆದು ತಿವಿದುಕೊಳ್ಳಲು ಉದ್ಯುಕ್ತಳಾದಳು. ಅಷ್ಟರಲ್ಲಿ ಚಂಪಾದೇವಿಯು ಹಿಂದಿನಿಂದ ಬಂದು ಬರ್ಚಿಯನ್ನು ಹಿಡಿದು "ತಂಗೀ, ಇದೇನು ನಡಿಸಿರುವೆ? ಆತ್ಮಹತ್ಯೆಯು ಮಹಾ ಪಾಪಕರವೆಂಬದು ಗೊತ್ತಿಲ್ಲವೇ?" ಎನ್ನಲು

ಲೀಲೆಯು ಅವಳನ್ನು ಅಪ್ಪಿಕೊಂಡು ಕಣ್ಣೀರು ಸುರಿಸಹತ್ತಿದಳು. ಆಗ ಚಂಪಾದೇವಿಯು "ಲೀಲೆ, ನಿನಗೆ ಎಷ್ಟು ಸಲ ನಾನು ಹೇಳಲಿ? ಹುಚ್ಚೀ. ಯಾವ ಏಕನಾಥ ಲಿಂಗೇಶನ ಸ್ಮರಣೆ ನೀನು ನಡಿಸಿರುವೆಯೋ, ಅವನು ನಿನ್ನನ್ನು ಬಿಡುವನೇ? ದುಷ್ಟರನ್ನು ದಂಡಿಸಿ, ಶಿಷ್ಟರನ್ನು ರಕ್ಷಿಸುವದು ಅವನ ಆದ್ಯ ಕರ್ತವ್ಯವಿದೆ" ಎಂದು ನುಡಿಯುವ ಸ್ವರಲ್ಲಿ ರಮೇಶನು ಪ್ರವೇಶಿಸಿ "ಲೀಲೆ, ನಾನೂ ರಾಜಶೇಖರನೂ ಕೂಡಿ ನಿನ್ನನ್ನು ಸಂಕಟದಿಂದ ಮುಕ್ತ ಮಾಡಿಯೇ ತೀರುವೆವು. ಇದಕ್ಕಾಗಿ ನಾವು ಒಂದು ಯೋಚನೆಯನ್ನು ತೆಗೆದಿರುವೆವು." ಎಂದು ಕಿವಿಯಲ್ಲಿ ಹೇಳಿ ಏನೋ ಬರೆಯಲಿಕ್ಕೆ ತಿಳಿಸಿದನು. ಆಗ ಲೀಲೆಯು ಆನಂದದಿಂದ ಒಂದು ಪತ್ರವನ್ನು ಬರೆದು ಕೊಟ್ಟಳು. ರಮೇಶನು ಅದನ್ನು ತೆಗೆದುಕೊಂಡು ರಾಜಶೇಖರನ ಮನೆಗೆ ಬಂದನು. ಆಗ ರಾಜಶೇಖರನೂ ವಿಚಾರ ಮಾಡುತ್ತ ಮಲಗಿದ್ದನು. ರಮೇಶನು ಬಂದದ್ದನ್ನು ನೋಡಿ ರಾಜಶೇಖರನು ಎದ್ದು ಕುಳಿತು, "ರಮೇಶಾ ಈಗ ಮಹಾರಾಣಾ ಜೋರಾವರ ಸಿಂಹರ ಬಳಿ ಹೋಗಲು ಯಾರು ಸಮರ್ಥರಿದ್ದಾರೆ?" ಎನ್ನುವದರೊಳಗೆ ಅಜೀತನೊಬ್ಬನು ಬಂದು "ರಾಜಕುಮಾರ, ಈ ಕಾರ್ಯಕ್ಕಾಗಿ ನಾನು ಸಿದ್ಧನಿದ್ದೇನೆ. ಅಪ್ಪಣೆಯಾಗಬೇಕು. ಆ ನನ್ನ ತಂಗಿಯ ಸಲುವಾಗಿ ಈ ಶಿರವನ್ನು ತೆಗೆದಿಡಲು ಸಿದ್ಧನಿದ್ದೇನೆ." ಈ ಮಾತುಗಳನ್ನು ಕೇಳಿದ ಕೂಡಲೇ, ರಮೇಶನ ಕಣ್ಣುಗಳಲ್ಲಿ ನೀರೂರಿದವು." "ಧನ್ಯ ಬಂಧು. ನಿನ್ನಂತಹ ವೀರ ಪುತ್ರರನ್ನು ಹಡೆದ ಈ ಭಾರತ ಮಾತೆಯೇ ಧನ್ಯಳು. ಹೋಗು ನಿನ್ನ ತಂಗಿಯು ಬರೆದ ಓಲೆಯನ್ನು ಧರ್ಮಾಭಿಮಾನಿಯಾದ ಜೋರಾವರನಿಗೆ ಒಪ್ಪಿಸು." ಎನ್ನಲು ಅಜೀತನು "ರಮೇಶಾ ಆಶ್ಚರ್ಯಪಡಬೇಡ. ನಾನು ಹೋದ ಕೆಲಸವು ಯಶಸ್ವಿಯಾಯಿತೆಂದೇ ತಿಳಿ." ಎಂದವನೇ ಹೊರಗೆ ಬಂದು ಕುದುರೆಯನ್ನು ಹತ್ತಿ ನಡೆದನು.

ಮರುದಿನ ಮುಂಜಾವದಲ್ಲಿ ವಿಜಯಕುಮಾರನು ಮತ್ತೊಮ್ಮೆ ಮಹಾರಾಣಾರವರ ಅನುಜ್ಞೆ ಪಡೆಯಲು ಬಂದಿದ್ದನು. ಆದರೆ ಅಷ್ಟ ರಲ್ಲಿ ಮೇವಾಡದಿಂದ ಒಬ್ಬನು ಬರುತ್ತಿರುವನೆಂದು ದೂತರಿಂದ ತಿಳಿದ ಕೂಡಲೆ, ಭೆಟ್ಟಿಯಾಗುವದಕ್ಕೋಸ್ಕರ ನಿಂತುಕೊಂಡನು. ಅಷ್ಟರಲ್ಲಿ ಅಜೀತನೂ ಬಂದು ಮಹಾರಾಣಾನಿಗೆ ನಮಸ್ಕರಿಸಿದನು. ಆಗ ರಾಣಾ ಜೋರಾವರಸಿಂಹನು ಅವನನ್ನು ಸ್ವಾಗತಿಸಿ, ಅತಿಥಿಸತ್ಕಾರ ವನ್ನು ಮಾಡಿದನು. ನಂತರ ಅಜೀತನು ತಾನು ಬಂದ ವೃತ್ತಾಂತ ವನ್ನೆಲ್ಲ ಅರುಹಿ "ಲೀಲಾದೇವಿಯು ತನ್ನ ಮಾನರಕ್ಷಣೆಗೋಸುಗ ನಿಮಗೆ ಶರಣು ಬಂದಿದ್ದಾಳೆ" ಎಂದು ಓಲೆಯನ್ನು ಕೊಟ್ಟನು. ಆ ಪತ್ರವನ್ನು ಮಹಾರಾಣಾನು ಓದಿ ನೋಡಿ, ವಿಜಯನ ಕಡೆಗೆ ಕೊಟ್ಟನು. ಪತ್ರದ ಸಾರಾಂಶವು ಹೀಗೆ ಇತ್ತು:—

ಮಹಾರಾಣಾ,

ತಮ್ಮ ಶೌರ್ಯವನ್ನು ನಾನು ಅನೇಕ ಬಾರೆ ಕೇಳಿ ದ್ದೇನೆ. ಆದರೆ ತಮ್ಮ ಶೂರತ್ವದ ಪರೀಕ್ಷೆಯು ಈಗ ನಡೆಯುವ ದೆಂಬದನ್ನು ಹೇಳಲು ಅಭಿಮಾನವೆನಿಸುತ್ತದೆ. ಹಿಂದೂ ಧರ್ಮಾಭಿ- ಮಾನಿಯಾದ, ಈ ರಜಪೂತ ಕನ್ನಿಕೆಯು ಮಾನರಕ್ಷಣೆಯಗೋಸುಗ ಶರಣು ಬಂದಿದ್ದಾಳೆ. ಶರಣು ಬಂದವರನ್ನು ರಕ್ಷಿಸುವದು ಕ್ಷತ್ರಿ ಯರ ಧರ್ಮವಿದೆ. ಇನ್ನು ಕೆಲವೇ ದಿನಗಳಲ್ಲಿ ನನ್ನನ್ನು ಒಯ್ಯಲು ದಿಲ್ಲಿಯಿಂದ ಮೇಣೆಯು ಬರುವದು. ಅಷ್ಟರಲ್ಲಿ ಮಾನವುಳಿಯು ವಂತಿದ್ದರೆ ಮಾತ್ರ ಜೀವದಾಶೆ. ಇಲ್ಲವಾದರೆ ಮಾತಾ ಪದ್ಮಿನಿದೇ ವಿಯು ಹಾದಿಯನ್ನು ತೋರಿಸಿ ಕೊಟ್ಟಿದ್ದಾಳೆ.

ರಾಣಾ, ತಮಗೆ ಗೊತ್ತಿದೆ. ಒಬ್ಬ ಸೀತೆಯ ಸಲುವಾಗಿ ರಾಮಾಯಣವೂ, ಒಬ್ಬ ದ್ರೌಪದಿಯ ಮಾನಭಂಗದ ಸಲುವಾಗಿ.

ಶ್ರೀಕೃಷ್ಣ ಪರಮಾತ್ಮನು ಧರ್ಮ—ಯುದ್ಧವನ್ನು ಹೂಡಿ ಮಹಾಭಾರ-ತವನ್ನು ರಚಿಸಿದರು. ಅವರಂತೆಯೇ ಆತನ ವಂಶಜರಾದ ನಾವು ಈ ಹಿಂದೂ ಧರ್ಮದ ಅಭಿಮಾನವಿದ್ದರೆ ನನ್ನೊಬ್ಬಳ ಸಲುವಾಗಿ ಹೋರಾಡಿರಿ.

ದೇವರು ಸರ್ವರಿಗೂ ಕಲ್ಯಾಣವನ್ನೀಯಲೆಂದು ಪ್ರಾರ್ಥಿಸುತ್ತೇನೆ.

ಓಲೆಯನ್ನು ಓದಿದ ಕೂಡಲೇ ವಿಜಯಕುಮಾರನು " ಮಹಾ ರಾಣಾ, ಈ ಪತ್ರದ ಹಿಂದೊಂದು ವಾಕ್ಯವು ನನಗೆ ಸ್ಫೂರ್ತಿ ಯನ್ನು ಕೊಡುವಂತಿದೆ. " ಎನ್ನಲು ಅಜಿತನು " ಮಹಾರಾಣಾ, ವಿಳಂಬ ಮಾಡಿ ಉಪಯೋಗವಿಲ್ಲ. ಅನುಜ್ಞೆಯನ್ನು ಕೊಡಿರಿ " ಎನ್ನಲು ಮಹಾರಾಣನು ಸ್ವಲ್ಪ ಖಿನ್ನವಾಗಿ " ಮಹನೀಯರೇ, ತಮ್ಮ ಮಾತು ನಿಜವಿದೆ. ಈಗ ಸದ್ಯಕ್ಕೆ ನನ್ನ ನೆಚ್ಚಿನ ವಿಜಯ-ಕುಮಾ ರನನ್ನು ಕಳುಹಿಸಿ ಕೊಡುತ್ತೇನೆ. ಇದಕ್ಕಿಂತಲೂ ಹೆಚ್ಚಿನ ಪ್ರಸಂಗ ವೊದಗಿದರೆ, ನಾನೇ ಸ್ವತಃ ನನ್ನ ಸೈನ್ಯದೊಂದಿಗೆ ಬರುವೆನು " ಎಂದು ಅವರನ್ನು ಆಶೀರ್ವದಿಸಿ ಊರ ಹೊರಬಾಗಿಲಿನವರೆಗೆ ಸ್ವಾಗತಿಸಿ ಕಳುಹಿಸಿ ಕೊಟ್ಟನು.

ರಾತ್ರಿಯ ಸಮಯ. ಲೀಲಾದೇವಿಯು ಊಟ ಮಾಡದೆ ಹಾಗೆಯೇ ಕುಳಿತುಕೊಂಡಿದ್ದಾಳೆ. ತಾಯಿಯು ಸಮಾಧಾನವನ್ನು ಹೇಳುತ್ತಿದ್ದಾಳೆ. ಮಹಾರಾಣಿಯು " ಮಗಳೇ, ಹೀಗೇಕೆ ಮಾಡು ವಿಯಮ್ಮಾ? ನಿನ್ನಷ್ಟು ಭಾಗ್ಯವಂತರು ಯಾರೂ ಇಲ್ಲವೆಂದು ತಿಳಿ ಯುತ್ತೇನೆ " ಎಂದು ಮಾತಾಡುವಷ್ಟರಲ್ಲಿ ಲೀಲೆಯು ಸಿಟ್ಟಿನಿಂದ ಎದ್ದು " ಸಾಕು ಮಾಡು ಅವ್ವಾ. ನಿಜ, ದಿಲ್ಲಿಯ ಬಾದಷಹನು

ನನ್ನ ಕೈ ಹಿಡಿಯುವನಲ್ಲವೇ? ರಜಪೂತ ಮಾತೆಯ ಉದರದಲ್ಲಿ ಹುಟ್ಟಿ, ಅವಳ ಹಾಲನ್ನು ಕುಡಿದು, ಕಡೆಗೆ ಯವನ ಧರ್ಮಕ್ಕೆ ಮಾರಿ ಹೊರಟಳೆಂದ ಮೇಲೆ ನನ್ನಷ್ಟು ಭಾಗ್ಯವಂತರಾರು?" ಅದಕ್ಕೆ ತಾಯಿಯು "ಅವರೆ ಲೀಲಾ, ನಿನ್ನೊಬ್ಬಳ ಸಲುವಾಗಿ ಇಡೀ ಮೇವಾಡವೇ ನಾಶವಾಗಬೇಕಾಗುವದು." ಈ ಮಾತುಗ ಳನ್ನು ಹೊರಗಿನಿಂದ ರಮೇಶನು ಕೇಳಿ ಆವೇಶದಿಂದ ಬಂದು ಖಡ್ಗ ವನ್ನು ತೆಗೆದು "ಮಾತೇ, ಎಲ್ಲರಿಗಿಂತಲೂ ಮೊದಲು ನಿನ್ನನ್ನೇ ಆಹುತಿ ತೆಗೆದುಕೊಳ್ಳುತ್ತಿದ್ದೆ. ಆದರೆ ಮಾತೆಯೆಂಬ ಪದವು ಕಣ್ಣೆದುರಿಗೆ ಬಂದು ನಿಲ್ಲುತ್ತದೆ. ನೀನು ನನ್ನ ಮಾತೆಯಾಗಿದ್ದು ನನ್ನ ದುರ್ದೈವವೇ ಇದೆ" ಎಂದವನೇ ಹೊರಗೆ ಬಂದು ಕುಳಿತು ಬಿಟ್ಟನು.

ಅಷ್ಟರಲ್ಲಿ ದೂರದಿಂದ ಅಜಿತನು ಕಾಣಿಸಿಕೊಂಡನು. ಆಗ ಅವನ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಕೂಡಲೇ ಅವ ರನ್ನು ಸ್ವಾಗತಿಸಬೇಕೆಂದು ಕೆಳಗಿಳಿದು ಬಂದು ಇಬ್ಬರನ್ನೂ ಅಪ್ಪಿ ಕೊಂಡನು. ನಂತರ ಅಜಿತನು "ರಮೇಶಾ, ಇಕೋ ನೋಡು. ಈ ಉರಿಯುತ್ತಿರುವ ಕಿಚ್ಚಿನಲ್ಲಿ ನಮ್ಮ ಕೂಡ ಜಿಗಿಯಲು, ಈ ವಿಜಯ ಕುಮಾರರೆಂಬ ಮಹನೀಯರು ಬಂದಿದ್ದಾರೆ" ಎಂದು ಅವರ ಪರಿಚಯ ಮಾಡಿಕೊಟ್ಟನು.

ಈ ವಿಜಯ ಕುಮಾರನನ್ನು ಮಹಡಿಯ ಮೇಲಿಂದಲೇ ನೋಡಿದ ಲೀಲೆಯು, ಅವನ ರೂಪಕ್ಕೂ, ಮಾತಿನ ಮೋಹಕ್ಕೂ ಮುಗ್ಧಳಾಗಿ ಬಿಟ್ಟಳು. "ನಮ್ಮ ರಜಪೂತ ಜನರಲ್ಲಿ ಇಷ್ಟು ರೂಪ ವಂತರು ಸಿಗುತ್ತಿರಲು, ಅಂಥಹ ಕಪಟಿ ಬಾದಷಹನಿಗೆ ವರಿಸುವದೇ? ಮದುವೆ ಆದರೆ ಇವನ ಕೂಡ ಆಗಬೇಕು" ಎಂದು ನಿಶ್ಚಯಿಸಿ ಕೊಂಡು ಒಳಗೆ ಹೋದಳು. ಇತ್ತ ರಮೇಶನು ಆದರಸತ್ಕಾರ ಕ್ಕೆಂದು ಒಳಗೆ ಕರಕೊಂಡು ಹೋಗಿ ಬಿಟ್ಟನು.

ರಾಜಕುಮಾರಿ ಲೀಲಾದೇವಿಯು ವಿಜಯಕುಮಾರನಿಗೆಂದು ಕೊಟ್ಟ ಕೋಣೆಯಲ್ಲಿ ಭೆಟ್ಟಿಯಾಗುವವಕ್ಕೆ ಹೋಗಿದ್ದಾಳೆ. ಆದರೆ ಆತನು ವಾಯುವಿಹಾರದಿಂದ ಇನ್ನು ಬಂದಿರಲಿಲ್ಲವಾದ್ದರಿಂದ, ಅಲ್ಲಿಯೇ ಪಲಂಗದ ಮೇಲೆ ಕುಳಿತು, ಕಣ್ಣು ಮುಚ್ಚಿಕೊಂಡು ದೇವರನ್ನು ಪ್ರಾರ್ಥಿಸತೊಡಗಿದಳು. ಕೆಲವು ಕ್ಷಣ ಗತಿಸಿದ ನಂತರ ವಿಜಯನು ಒಳಗೆ ಬಂದು ಲಾಂದ್ರವನ್ನು ಹಚ್ಚಿದ ಕೂಡಲೇ, ಧ್ಯಾನ ಮಗ್ನಳಾಗಿ ಕುಳಿತಿದ್ದ ರಾಜ-ಕುಮಾರಿಯು ಕಣ್ಣಿಗೆ ಬಿದ್ದಳು. ಆ ಲಾಂದ್ರದ ಬೆಳಕಿನಲ್ಲಿ ಅವನಿಗೆ, ಅವಳ ಮನೋಹರವಾದ ಮುಖದ ಕಾಂತಿಯೂ ತಲೆಯ ಮೇಲಿನ ಗುಂಗುರ ಕೂದಲಗಳೂ, ಗಾಳಿಗೆ ಹಾರಾಡಿ, ಆಕೆಗೆ ವಿಶಿಷ್ಟ ಶೋಭೆಯನ್ನು ಕೊಡುತ್ತಿದ್ದವು. ಈ ಸೌಂದರ್ಯದ ವಿಚಾರದ ಭರದಲ್ಲಿ ಪಕ್ಕದಲ್ಲಿದ್ದ ತಂಬಿಗೆಯನ್ನೇ ಉರುಳಿಸಬಿಟ್ಟನು. ಈ ಸ್ವಪಳದಿಂದ ಲೀಲಾದೇವಿಯು ಧ್ಯಾನ-ಭಂಗವಾಗಿ ತನ್ನೆದುರಿಗೆ ನಿಂತಿರುವ ಪುರುಷನನ್ನು ನೋಡಿ ಅವಳಿಗೆ ನಾಚಿಕೆಯೂ, ಅಂಜಿಕೆಯೂ, ಹುಟ್ಟಿ ಮೈಯು ಬೆವರಲಾರಂಭಿಸಿತು. ಆಗ ವಿಜಯನು ಸ್ವಲ್ಪ ಧೈರ್ಯದಿಂದ “ ರಾಜಕುಮಾರೀ ಅಂಜಿದೆನು ? ” ಎನ್ನಲು ಅವಳು ಇಲ್ಲವೆಂದು ಗೋಣನ್ನು ಅಲುಗಾಡಿಸಿದಳು. ಆಗ ಇಬ್ಬರಿಗೂ ಏನು ಮಾತಾಡಬೇಕೆಂಬುದೇ ತಿಳಿಯದಾಯಿತು. ಇಬ್ಬರೂ ಒಂದೇಸವನೆ ಪಕ ಪಕ ಮೋರೆಯನ್ನು ನೋಡಲಾರಂಭಿಸಿದರು. ಆ ನೋಟದಲ್ಲಿಯೇ, ಇಬ್ಬರ ಕಣ್ಣುಗಳು ಒಂದಾಗಿ ಅವರ ಜೀವನದ ಭವಿಷ್ಯವೇ ಬರೆಯಿತು. ಹೀಗೆ ಕ್ಷಣಕಾಲ ಕಳೆದ ನಂತರ ರಾಜಕುಮಾರಿಯು ನಸುನಕ್ಕು “ ಮಹನೀಯರೇ, ನಿಂತುಕೊಳ್ಳುವ ಪ್ರತಿಜ್ಞೆಯನ್ನು ತಗೊಂಡಿದ್ದೀರಾ ? ” ಎಂದು ಔತ್ಸಾಹ್ಯದಿಂದ ತನ್ನ

ಪಕ್ಕದಲ್ಲಿ ಕುಳ್ಳಿರಿಸಿಕೊಂಡಳು. ಆಗ ವಿಜಯನು “ ಕುಮಾರೀ, ಹೀಗೆ ಪರ–ಪುರುಷರನ್ನು ಸ್ಪರ್ಶಿಸುವದು ತರವೇ ? ಈ ರೀತಿಯು ಒಂದು ವೇಳೆ ನಿನ್ನ ತಾಯಿ ತಂದೆಗಳು ನೋಡಿದರೆ, ನಿನ್ನನ್ನು ಓಡಿಸಿಕೊಂಡು ಹೋಗಲು ಬಂದ ಕಳ್ಳನೆಂದು ಹೆಸರಿಡಲಿಕ್ಕಿಲ್ಲವೇ ? ”. ಆಗ ಲೀಲೆಯು ನಕ್ಕು “ ನಿಮ್ಮನ್ನು ನೋಡಿದಾಕ್ಷಣವೇ, ನನ್ನ ಮನಸ್ಸು ನಿಮ್ಮಲ್ಲಿ ಕುಳಿತಿದೆ. ಇನ್ನು ಇದಕ್ಕಿಂತಲೂ ಹೆಚ್ಚಿಗೆ ಏನು ಹೇಳಲಿ ? ” ಎನ್ನಲು ವಿಜಯನೂ ನಕ್ಕು “ ಕುಮಾರೀ, ಅವಸರ ಪಡಬೇಡ. ಒಂದು ವೇಳೆ ಈ ನಮ್ಮ ಗುಪ್ತತನವು, ಆ ಸರದಾರನಿಗೆ ಗೊತ್ತಾದರೆ, ನಮ್ಮ ಕಾರ್ಯವೆಲ್ಲವೂ ಭಂಗವಾದೀತು, ” ಆಗ ಲೀಲೆಯು “ ಇನ್ನು ನಿಮ್ಮ ಕಾರ್ಯಕ್ಕೆ ನಾನು ಅಡ್ಡಿ ಮಾಡುವದಿಲ್ಲ ಆಯಿತೇ ? ” ಎಂದು ಎದ್ದವಳೇ, ಮತ್ತೊಮ್ಮೆ ತನ್ನ ಪ್ರಿಯ ನೋಟದಿಂದ ಅವನನ್ನು ಮುಗ್ಧಗೊಳಿಸಿ, ಅವನ ಸಮ್ಮತಿಯನ್ನು ಪಡಕೊಂಡು ಹೊರಗೆ

ಈ ಪ್ರಕಾರ ಕೆಲವು ದಿನಗಳು ಗತಿಸಲು ಒಂದು ದಿನ ಸಂಜೆಗೆ ಸೂರ್ಯಾಸ್ತವಾದ ನಂತರ ಸುಮಾರು ಹದಿನಾರು ವರ್ಷದ ಕೋಮಲೆಯು ಹೊಲದಿಂದ ಬರುತ್ತಿದ್ದಳು. ಆ ವೇಳೆಯಲ್ಲಿ ಅಕಬರ ಖಾನನ ಜನರಲ್ಲಿಯ ಒಬ್ಬನು ಅದೇ ದಾರಿಯಿಂದ ನಡೆದಿದ್ದನು. ಆಗ ಆ ತರುಣಿಯು, ಅಕಸ್ಮಾತ್ ಆ ಕಾಮುಕನ ಕಣ್ಣಿಗೆ ಬಿದ್ದಳು. ಕೂಡಲೇ ಅವನು ಅವಳನ್ನು ಹಿಂಬಾಲಿಸಿದನು. ಇದರಿಂದ ಆಕೆಗೆ ಸಂಶಯ ಬಂದು ಅಲ್ಲಿಯೇ ದೂರದಲ್ಲಿ ನಿಂತಿದ್ದ ಅಜಿತನನ್ನು ಕರೆಯ ತೊಡಗಿದಳು. ಆಗ ಆ ದುಷ್ಟನು ಘಾತವಾಯಿತೆಂದು ತಿಳಿದು, ಅವ ಳನ್ನು ಹಿಡಿಯ ಹೋದನು. ಅಷ್ಟರಲ್ಲಿ ಅಜಿತನು ಬಂದು ಅವನನ್ನು ಜಗ್ಗಿ ಹಿಡಿದು ಬಿಟ್ಟನು. ಆಗ ಆತನು ಅವನ ಪಾದಗಳ ಮೇಲೆ

ಬಿದ್ದು " ನಾನು ಮಾಡಿದುದು ಮಹಾಪರಾಧ " ಎಂದು ತಪ್ಪನ್ನು ಒಪ್ಪಿಕೊಂಡನು. ಆಗ ಅಜಿತನು ಕರುಣೆಯಿಂದ ಎಬ್ಬಿಸಿ " ಎಲೈ ಸರದಾರನೇ, ನೀನು ಯಾರೆಂಬುದನ್ನು ನಾನು ಬಲ್ಲೆ. ಆದರೆ ಈ ಮೇವಾಡದ ಹದ್ದಿಯನ್ನು ದಾಟುವತನಕ, ಯಾವ ಹೆಂಗಸಿಗಾದರೂ ಸ್ಪರ್ಶ ಮಾಡಿದರೆ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ. ಇದೂ ಅಲ್ಲದೆ ನೀವು ಯಾವ ರಾಜಕುಮಾರಿಯನ್ನು ಒಯ್ಯಲು ಬಂದಿರುವಿರೋ, ಅವಳು ನಿಮ್ಮ ಬಾದಶಹನ ಮುಖವನ್ನು ಕೂಡ ನೋಡಲಾರಳು. " ಎಂದು ಬೀಳ್ಕೊಟ್ಟನು.

ಆ ಸರದಾರನಿಗೆ ಇದರಿಂದ ಅಪಮಾನವಾದಂತಾಗಿ, ಅವನ ಕಡೆಯ ವಾಕ್ಯವಂತು, ಹೃದಯವನ್ನೇ ಭೇದಿಸಿತು. ಅವನು ಆ ವಾಕ್ಯವನ್ನು ಪಸೇ ಪಸೇ ನುಡಿಯುತ್ತ, ತನ್ನ ಸ್ಥಳಕ್ಕೆ ಬಂದರೂ, ಅದರ ಎಚ್ಚರವೇ ಇದ್ದಿಲ್ಲ. ಆಗ ಸೇನಾಪತಿ ಅಕಬರಖಾನನು ಬೆದರಿಸಿದ ಕೂಡಲೇ ನಡೆದ ಘಟನೆಯನ್ನೆಲ್ಲವನ್ನು ತಿಳಿಸಿ ಹೇಳಿದನು. ಹಾಗೂ ಆ ಕುಮಾರನು ಇಲ್ಲಿಯೇ ರಾಜಗೃಹಕ್ಕೆ ಬರುವನೆಂದೂ, ಬೇಕಾದರೆ ಅವನನ್ನು ತೋರಿಸಿ ಕೊಡುವೆನೆಂತಲೂ ಹೇಳಿದನು. ಇದರಿಂದ ಆ ಖಾನನ ಮನಸ್ಸಿಗೂ ಧಕ್ಕೆಯಾಗಿ ರಾಣನು ಒಪ್ಪಿದರೂ ಹುಡುಗರಲ್ಲಿ ಏನಾದರೂ ಗವ್ದಲವಿದೆ ಎಂದು ಊಹಿಸಿ " ನೀವು ಆ ಹುಡುಗರನ್ನು ಚಿಕ್ಕವರೆಂದು ತಿಳಿಯಬೇಡಿ. ಆದ್ದರಿಂದ ಆವಷ್ಟು ಆ ಹುಡುಗರ ಮೇಲೆ ಕಣ್ಣಿಡಬೇಕು. " ಎಂದು ತಿಳಿಸಿದನು.

೬

ಇಂದು ದಿಲ್ಲಿಯಲ್ಲಿ ಔರಂಗಜೇಬ ಬಾದಷಹನ ದರ್ಬಾರು ಕೂಡಿದೆ. ವರ್ಷದ ಸುಗ್ಗಿಯು ಮುಗಿದದ್ದರಿಂದ, ತನ್ನ ರಾಜ್ಯದಲ್ಲಿ ವಸೂಲಿಗೆಂದು ಕಳುಹಿಸಿದ ಎಲ್ಲ ಸರದಾರರನ್ನು ಕರೆಯಿಸಿ, ಅವರ ಧನ ಧಾನ್ಯವನ್ನು ಬೊಕ್ಕಸದಲ್ಲಿ ಹಾಕಿಕೊಳ್ಳಹತ್ತಿದ್ದಾನೆ.

ಎಲ್ಲ ಸರದಾರರೂ ತಾವು ಪೀಡಿಸಿದ ಹಿಂದೂ ಜನರನ್ನು ವರ್ಣನೆ ಯಾಗಿ ಹೇಳುತ್ತಿದ್ದಾರೆ. ಇವರ ಮಾತುಗಳಿಂದ ಬಾದಷಹನು ಮತ್ತಿಷ್ಟು ಉಲ್ಹಾಸಿತನಾಗಿದ್ದಾನೆ. ಆದರೆ ಒಬ್ಬ ಸರದಾರನು ಮಾತ್ರ ತಲೆ ತಗ್ಗಿಸಿಕೊಂಡು ನಿಂತಿದ್ದಾನೆ. ಅವನು ಜಾತಿಯಿಂದ ಮುಸಲ್ಮಾನನಾದರೂ ಹಿಂದೂಗಳಿಗಾಗುತ್ತಿರುವ ಅನ್ಯಾಯವನ್ನು ನೋಡಿ ದುಃಖಿಸುತ್ತಿದ್ದ ಅದರಂತೆಯೇ ಈ ಜನರಾದರೂ ಮಾಡಿದ ಅನ್ಯಾಯಗಳನ್ನು ಕೇಳಿ, ಕರುಣಾ ಹೃದಯದ ಆ ಮೂರ್ತಿಗೆ ಕಣ್ಣಲ್ಲಿ ನೀರೂರಿದವು. ಅಕಸ್ಮಾತ ಬಾದಷಹನ ದೃಷ್ಟಿ, ಆ ಸರ ದಾರನ ಮೇಲೆ ಬಿದ್ದು, ಅವನ ಕಣ್ಣೀರಿನ ಹಸಿಗೆ ಬಾದಷಹನ ಮನಸ್ಸು ಕಳವಳಗೊಂಡಿತು. ಆದ್ದರಿಂದ ಬಾದಷಹನು "ನೂರುಲ್ಲಾ ಸಾಹೇಬರೇ, ತಾವು ಹೀಗೆ ಶೋಕಿಸುತ್ತಿರುವ ಕಾರಣವೇನು ? ಯಾವ ಹಿಂದೂ ಅಧಮರಾದರೂ ನಿಮ್ಮನ್ನು ಪೀಡಿಸಿದರೇ ಹೇಳಿರಿ ? ಆ ನೀಚನನ್ನು ನಿಮ್ಮ ಸಮ್ಮುಖದಲ್ಲಿಯೇ ರುಂಡವನ್ನು ಹಾರಿಸು ತ್ತೇನೆ." ಬಾದಶಹನ ಈ ಮಾತಿನಿಂದ ನೂರುಲ್ಲಾನ ಮನಸ್ಸು ಮತ್ತಿಷ್ಟು ಕುಗ್ಗಿತು, ಆದರೂ ಧೈರ್ಯದಿಂದ "ಜಹಾಪನಾ, ತಾವು ನಡೆಸಿರುವದು ಮಹಾಪರಾಧ ಕರುಣಾಳುಗಳಾದ ಹಿಂದುಗಳು ತಮ್ಮನ್ನು ಇಷ್ಟು ಭಕ್ತಿಯಿಂದ ಕಾಣುತ್ತಿರಲು, ಅವರನ್ನು ಬೇಕಾದ ಹಾಗೆ ಪೀಡಿಸುವದು ಲೇಸವೇ ?" ಈ ಮಾತಿನಿಂದ ಬಾದಷಹನು ಸ್ವಲ್ಪ ಸಿಟ್ಟಿಗೆದ್ದು "ಎಲೋ ನೀಚಾ, ನೀನು ಯಾರ ಸಮ್ಮುಖದಲ್ಲಿ ನಿಂತು ಮಾತಾಡುತ್ತಿರುವಿ ಎಂಬದು ನೆನಪಿದೆಯೋ ? ಇದೇ ನಿನ್ನ ಜಾಗೆಯಲ್ಲಿ ಯಾವನಾದರೊಬ್ಬ ಕಾಫರ ನಿಲ್ಲುತ್ತಿದ್ದರೆ, ಅವನ ನಾಲಿ ಗೆಯು ಹೋಳಾಗಿ ಬಿಡುತ್ತಿತ್ತು." ಅದಕ್ಕೆ ನೂರುಲ್ಲಾನು "ಜಹಾ ಪನಾ, ನಾನು ತಾವು ಯಾರೆಂಬವನ್ನು ನೆನಪಿನಲ್ಲಿಟ್ಟುಕೊಂಡೇ ತಮ್ಮ ಬಳಿಗೆ ನ್ಯಾಯವನ್ನು ಹೇಳುವದಕ್ಕಾಗಿ ಬಂದಿದ್ದೇನೆ. ತಮ್ಮ ಈ ಪೀಡನೆಯಿಂದ ರೊಚ್ಚಿಗೆದ್ದ ಹಿಂದೂಗಳು ಈ ರಾಜ್ಯವನ್ನು ಬುಡ

ಮೇಲು ಮಾಡುವವದರಲ್ಲಿ ಸಂದೇಹವಿಲ್ಲ" ಎನ್ನಲು ಒಬ್ಬ ಸರದಾರನು ಗಹಗಹಿಸಿ ನಕ್ಕು "ದಿಲ್ಲಿಯ ಸಿಂಹಾಸನವನ್ನುರುಳಿಸುವ ಅಥವಾ ಈ ಬಾದಶಹರ ಸನ್ಮುಖದಲ್ಲಿ ನಿಂತು ಮಾತಾಡುವ ಅದಾವ ವೀರನು ?" ಈ ಮಾತಿಗೆ "ಎಲೋ, ಬಾದಶಹನ ಸನ್ಮುಖದಲ್ಲಿ ನಿಂತಿರುವೆನೆಂದು ಜಂಭದಿಂದ ಹೀಗೆ ನುಡಿಯಬೇಡ. ಇದೇ ಮಹಾರಾಷ್ಟ್ರವನ್ನು ಆಳುತ್ತಿರುವ ಶಿವಾಜಿಯನ್ನು, ಬಾದಶಹರು ಕೈದು ಮಾಡಿಟ್ಟಿರುವಾಗ ತಮ್ಮ ಕಣ್ಣಲ್ಲಿ ಮಣ್ಣನ್ನೊಗೆದು ಪಾರಾದ ನಲ್ಲವೇ ? ಆತನೇ ಶಿವಾಜಿಯು, ಅಪಝುಲಖಾನನ ಹೊಟ್ಟೆ ಹರಿಯುತ್ತಿರುವಾಗ ಅವನ ಸಮ್ಮುಖದಲ್ಲಿ ನಿಂತ ನೀನು ಅಂಜಿ ಗದಗದನೆ ನಡುಗುತ್ತಿಷ್ಟೆಯಲ್ಲವೇ ? ಆಗ ಈ ನಿನ್ನ ವೀರತನದ ಮಾತುಗಳು ಎಲ್ಲಿ ಅಡಗಿದ್ದವು !" ಎನ್ನಲು ಆ ಸರದಾರನು ಬಾದಶಹನಿಗೆ "ಜಹಾಪನಾ, ಈ ನೀಚನು ನಿಮ್ಮ ಸಮ್ಮುಖದಲ್ಲಿಯೇ ನನ್ನ ಅಪಮಾನ ಮಾಡುತ್ತಿರಲು ಸುಮ್ಮನೆ ಕುಳಿತಿದ್ದೀರಾ ?" ಆಗ ಬಾದಶಹನು "ಸರದಾರಾ, ಸ್ವಲ್ಪ ಶಾಂತಿಯನ್ನು ತಾಳು. ನನ್ನ ಎದುರಿಗೆ, ನನ್ನ ಸಿಂಹಾಸನಕ್ಕೆ ಅಪಮಾನವನ್ನು ಮಾಡುತ್ತಿರುವ ಈ ನೀಚನ ಧೈರ್ಯವೆಷ್ಟಿದೆಂಬದನ್ನು ನೋಡೋಣ" "ಬಾದಶಹರೇ ನಿಜ. ನನ್ನ ಮಾತುಗಳಿಂದ ನಿಮ್ಮ ಸಿಂಹಾಸನಕ್ಕೆ ಅಪಮಾನವಾಗುತ್ತಿದೆ. ಆದರೆ ನನ್ನ ಇಸ್ಲಾಮೀ ಧರ್ಮಕ್ಕೆ ಹತ್ತುತ್ತಿರುವ ಈ ಕಲಂಕವನ್ನು ನಾನು ಸಹಿಸಲಾರೆ." ಆಗ ಮತ್ತೊಬ್ಬ ಸರದಾರನು ನಡುವೆಯೇ "ಎಲೋ ನೀಚಾ, ಆ ಧರ್ಮವನ್ನು ಬೆಳಿಸುವದರ ಸಲುವಾಗಿಯೇ ನಾವು ನಮ್ಮ ಪ್ರಾಣವನ್ನು ಕೂಡ ತೆಗೆದಿಟ್ಟದ್ದೇವೆ" ಎನ್ನಲು, ಈ ತರದ ಅನ್ಯಾಯದಿಂದ ನಮ್ಮ ಧರ್ಮದ ಉದ್ಧಾರವೇ ? ಯಾವ ಹಿಂದೂ ಜನರು ಗೋವುಗಳನ್ನು ದೇವತೆಯಂತೆ ಪೂಜಿಸುವರೋ, ಸ್ತ್ರೀಯರನ್ನು ಮಾತೃ-ಪ್ರೇಮದಿಂದ ಕಾಣುತ್ತಾರೋ, ಅಂಥ ಪೂಜನೀಯ ವಸ್ತುಗಳನ್ನು ಅಪಹರಿಸುವದು ನಮ್ಮ ಧರ್ಮದ ಅಭಿಮಾ

ನವೇ ? ಮಹಾತ್ಮಾ ಪೈಗಂಬರರು ' ಪ್ರಾಣಿಗಳ ಮೇಲೆ ದಯೆಯಿರಲಿ. ಸಕಲ ಮಾನವರೂ ಒಂದಾಗಲಿ ' ಎಂಬ ವಾಕ್ಯವನ್ನು ಪೂರ್ಣಗೊಳಿಸುವದಕ್ಕಾಗಿ, ತಮ್ಮ ದೇಹವನ್ನೇ ಸವೆಸಿದರು. ಸಮಸ್ತ ಧರ್ಮಗಳೂ ಕೂಡ " ದಯೆ ಇಲ್ಲದ ಧರ್ಮವಾವುದಯ್ಯಾ ? ದಯೆ ಇರಬೇಕು ಸಕಲ ಪ್ರಾಣಿಗಳಿಗೆ ಎಂದು ಸಾರಿ ಹೇಳುತ್ತಿರಲು, ಆ ಧರ್ಮಗಳಿಗೆ ತಾವು ಅನ್ಯಾಯವನ್ನು ಮಾಡುತ್ತಿದ್ದೀರಿ " ಎಂದು ಸುಮ್ಮನೆ ನಿಂತುಕೊಂಡು ಬಿಟ್ಟನು.

ಈ ಪ್ರಕಾರ ನೂರುಲ್ಲಾನು ಸುಮ್ಮನೆ ನಿಂತಕೂಡಲೇ, ಅವರಂಗಜೇಬನು ತಿರಸ್ಕಾರದಿಂದ ಗಹಗಹನೆ ನಗಲಾರಂಭಿಸಿದನು. ಇದ-ರಿಂದ ಸಭೆಯಲ್ಲಿ ಗೊಂದಲವೇ ಹಿಡಿವಂತಾಗಿ ಪಾಪ, ಆ ನೂರು-ಲ್ಲಾನ ಮುಖವೇ ಸಣ್ಣದಾಯಿತು. ಆದರೆ ನಿಜಧರ್ಮಾಭಿಮಾ-ನಿಯಾದ ಆತನು, ಇದನ್ನು ಶಾಂತರೀತಿಯಿಂದ ಸಹಿಸಿಕೊಂಡಿದ್ದನು. ಕಡೆಗೆ ಎಲ್ಲವೂ ಶಾಂತವಾದ ಬಳಿಕ, ಬಾದಷಹನು ಅವನನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿದರು. ನಂತರ " ಶಹಬ್ಬಾಸ ಬಹಾದ್ದರ ಇಷ್ಟು ಧೈರ್ಯದಿಂದ ಮಹಾತ್ಮಾ ಪೈಗಂಬರನ ಹಾಗೆ ಅಮೃತವಾಕ್ಯಗಳನ್ನು ಹೇಳಲು, ಇಲ್ಲಿಯವರೆಗೆ ಯಾರೂ ಭೆಟ್ಟಿಯಾಗಿದ್ದಿಲ್ಲ. ಇಷ್ಟು ದಿನಗಳವರೆಗೆ ನಿನ್ನನ್ನು ಯ�ಃಕಶ್ಚಿತ ಮಾನವನೆಂದು ತಿಳಿದಿದ್ದೆನು " ಎಂದು ಮತ್ತೆ ಜೋರನೆ ನಗಲಾರಂಭಿಸಿದನು. ಇದರಿಂದ ಉಳಿದ ಸರದಾರರೂ, ಜನರೂ ಅಂಜಿ ಬೆಪ್ಪಾಗಿ, ಈಹೊತ್ತಿನ ದರ್ಬಾರದ ಪ್ರಕರಣವು ಎಲ್ಲಿಗೆ ಹೋಗುವದೋ ಎಂದು ಕುಳಿತು ಬಿಟ್ಟರು. ಆದರೆ ಆ ನೂರುಲ್ಲಾನು ಮಾತ್ರ ಇದಾವದಕ್ಕೂ ಸೊಪ್ಪು ಹಾಕದೆ ಅಪರಾಧಿಯಂತೆ ಸುಮ್ಮನೆ ನಿಂತುಬಿಟ್ಟಿದ್ದನು. ಕಡೆಗೆ ಬಾದಷಹನು " ಈ ನೀಚನನ್ನು ಬಂಧಿಸಿ ದಿನಕ್ಕೊಂದು ರೀತಿಯಿಂದ ಪೀಡಿಸಿ, ಕಡೆಗೊಂದು ದಿನ ರುಂಡವನ್ನು ಹಾರಿಸಿ ಬಿಡಿರಿ. ಎಂದು

ಅಜ್ಞಾಪಿಸಿದನು. ಆಗ ನೂರುಲ್ಲಾನು ಅಲ್ಲಾನನ್ನು ಪ್ರಾರ್ಥಿಸಿದ ನಂತರ "ಜಹಾಪನಾ, ಇಷ್ಟು ದಿನಗಳವರೆಗೆ ನಾನು ಅಲ್ಲಾನಿಗೆ ಏನನ್ನು ಪ್ರಾರ್ಥಿಸತೊಡಗಿದ್ದೆನೋ ಅದನ್ನಿಂದು ದಯಪಾಲಿಸಿದುದಕ್ಕಾಗಿ ಆಭಾರಿಯಾಗಿದ್ದೇನೆ. ಆದರೆ ಧರ್ಮಕ್ಕೆ ಕಲಂಕವನ್ನು ತಟ್ಟದಂತೆ ನೋಡಿರಿ. ಒಂದು ವೇಳೆ ತಮ್ಮ ಪೂಜ್ಯ ಅಣ್ಣಂದಿರು ಪಟ್ಟವನ್ನೇರಿದ್ದರೆ, ಈ ತರದ ಅನ್ಯಾಯವೆಂದೂ ಆಗುತ್ತಿರಲಿಲ್ಲ." ಎಂದು ಗಂಭೀರ ಧ್ವನಿಯಿಂದ ನುಡಿದನು. ನೂರುಲ್ಲಾನ ಈ ಮಾತುಗಳು ಬಾದಷಹನ ಹೃದಯವನ್ನೇ ಕೊರೆದವು. ಇದರಿಂದ ಆತನ ಕಣ್ಣಲ್ಲಿ ಕ್ಷಣ ಹೊತ್ತು ನೀರೂರಿದವು. ಅವನ ಮುಖಚರ್ಯೆಯೇ ಬದಲಾಯಿತು. ಕಡೆಗೆ ಬಾದಶಹನು ಸಿಂಹಾಸನದಿಂದ ಎದ್ದು, ಅವನೆದುರಿಗೆ ನತ ಮಸ್ತಕವಾಗಿ "ವೀರನೇ, ನೀನು ಧನ್ಯನಿರುವಿ. ನಿನ್ನನ್ನು ನಿರ್ದೋಷನನ್ನಾಗಿ ಬಿಡಬಹುದಾಗಿತ್ತು. ಆದರೆ ನಮ್ಮ ಕಡು ವೈರಿಯಾದ ಶಿವಾಜಿಯನ್ನು ಎಣಿಸಿದ್ದಕ್ಕಾಗಿ ಕೇವಲ ನಜರಖಾನೆಯಲ್ಲಿರುವ ಶಿಕ್ಷೆಯಾಗಿದೆ" ಎಂದು ಹೇಳಿ ಅವನನ್ನು ಬಿಳ್ಕೊಟ್ಟು ಅಂದಿನ ದರ್ಬಾರವನ್ನು ಸಮಾಪ್ತಗೊಳಿಸಿದನು.

## ೧೦

ದಿಲ್ಲಿಯಲ್ಲಿರುವ ಒಂದು ಮಂದಿರದಲ್ಲಿ ಕೆಲವೊಂದು ತರುಣರು ಹರಟೆಯಾಡುತ್ತ ಕುಳಿತಿದ್ದರು. ಅವರ ಹರಟೆಯಲ್ಲಿ ಬಾದಷಹನು ನಡೆಸಿರುವ ಅನ್ಯಾಯದ ಬಗ್ಗೆಯೂ, ಹಾಗೂ ಆ ಅನ್ಯಾಯಕ್ಕೆ ಪ್ರತೀಕಾರವನ್ನೀಯುತ್ತಿರುವ, ಛತ್ರಪತಿ ಶಿವಾಜಿ ಮಹಾರಾಜನ ವರ್ಣನೆಯೂ ನಡೆದಿತ್ತು. ಈ ಮಾತುಗಳನ್ನು ಅಲ್ಲಿಯೇ ನಿಂತು ಕೇಳುತ್ತಿದ್ದ, ಬಾದಷಹನ ಸರದಾರನಾದ ಜಯಸಿಂಹನು ಒಳ್ಳೇ ಆವೇಶದಿಂದ "ಏನು ? ಕೆಲವೊಂದು ದುರ್ಗಗಳನ್ನು ಗೆದ್ದ ಮಾತ್ರಕ್ಕೆ ಆ ಪುಂಡನನ್ನು ಹೊಗಳುತ್ತಿದ್ದೀರಾ ? ಈ ಬಾದಷಹರ ಮುಂದೆ, ಭಾರತ

ವಲ್ಲಿರುವ ಸಮಸ್ತ ಹಿಂದೂ ರಾಜರೆಲ್ಲರೂ, ಮಾಂಡಲೀಕರಾಗಿ ನಡೆಯುತ್ತಿರಲು ಆ ಗುಡ್ಡದ ಇಲಿಯ ಆಟವೇನು ನಡೆದೀತು ? ” ಎಂದು ನಗಲಾರಂಭಿಸಿದನು.

ಆ ಗುಂಪಿನಲ್ಲಿ ಒಬ್ಬ ಧಿಟ್ಟ ತರುಣನಿದ್ದನು. ಜಯಸಿಂಹನ ಈ ಮಾತಿನಿಂದ ಅವನಿಗೆ ಬಹಳೇ ಸಿಟ್ಟು ಬಂದಿತು. ಉಳಿದ ಎಲ್ಲರ ಕಡೆಗೆ ನೋಡಲಾರಂಭಿಸಿದನು. ಆದರೆ ಅವರೆಲ್ಲರೂ ಅಂಜಿ ಬೆಪ್ಪಾಗಿ ಕುಳಿತಿದ್ದರು. ಇದರಿಂದ ಆ ತರುಣನ ಮೈಯೂ ಮತ್ತಿಷ್ಟು ಕಾವೇರಿತು. ಆಗ ಆವೇಶದಿಂದಲೇ, ಎದ್ದು ಅವನ ಎದುರಿಗೆ ಬಂದು “ಎಲೋ ನೀಚಾ, ಯಾವನು ಗೋ-ಬ್ರಾಹ್ಮಣರ ಪ್ರತಿಪಾಲನಕ್ಕಾಗಿ ತನ್ನ ಜೀವನವನ್ನೇ ಮುಡುಪಾಗಿಟ್ಟಿರುವನೋ, ಆ ಮಹಾತ್ಮನನ್ನು ನಿಂದಿಸುವ ನಿನ್ನ ನಾಲಿಗೆಯು ಹೋಳಾಗಲಿ. ತನ್ನ ಮಗನ ಮದುವೆಯನ್ನು ಬಿಟ್ಟು ಕೊಂಡಾಣೆಯ ಮದುವೆಗಾಗಿ ಹೊರಟ ಆ ತಾನಾಜಿಯನ್ನು ಮರೆತೆಯಾ ? ಎಲೋ ಜಯಸಿಂಹಾ, ಯಾವ ರಜಪೂತ ಮಾತೆಯಿಂದ ನೀನು ಜನಿಸಿ, ಅವಳ ಅಮೃತದಂತಿರುವ ಹಾಲನ್ನು ಕುಡಿದು, ನಿನ್ನನ್ನು ಇಷ್ಟು ಬಲಶಾಲಿಯನ್ನಾಗಿ ಮಾಡಿದ ಆ ಮಾತೆಯನ್ನೇ ಮರೆತೆಯಾ ? ಜಯಸಿಂಹಾ, ನಿನ್ನ ದೇಶದ ಗತವೈಭವವನ್ನು ನೆನಸಿಕೋ. ರಜಪೂತ ಕುಲದ, ಸ್ತ್ರೀಯರ ಉದ್ಧಾರಕ್ಕಾಗಿ ತನ್ನ ಸರ್ವಸ್ವವನ್ನೇ ತ್ಯಾಗ ಮಾಡಿದ, ಮಹಾರಾಣಾ ಭೀಮಸಿಂಗ, ಪ್ರತಾಪಸಿಂಹರನ್ನು ಮರೆತು ಬಿಡುವಷ್ಟು, ಬಾದಷಹನು ನಿನ್ನನ್ನು ಅಂಕಿತದಲ್ಲಿಟ್ಟುಕೊಂಡಿರುವನೇ ? ” ಎಂದು ಒಂದೇಸವನೆ ನುಡಿಯುತ್ತಿರುವಾಗ, ಅವನ ಕೈಗಳು ಕಂಪಿಸತೊಡಗಿದವು. ಕಣ್ಣುಗಳು ಕೆಂಪಾದವು. ಆದರೆ ಆ ಜಯಸಿಂಹಗೆ ತನ್ನತನದ ಅರಿವಾಗುವದರ ಬದಲು “ ಹಿಂದೂ ಧರ್ಮದ ಭಗವದ್ಗೀತೆಗಿಂತಲೂ, ಮುಸಲ್ಮಾನೀ ಧರ್ಮದ ಕುರಾನವೇ ಮೇಲು. ಆದರ ಒಂದು ಹಾಳೆಯನ್ನಾದರೂ ನೋಡಿದ್ದೀಯಾ ? ” ಎಂದು ನುಡಿದನು.

ಈ ಮಾತಿನಿಂದ ಆ ತರುಣನ ಬಾಯಿಯೇ ಹೋಯಿತು. ಅವನ ಕಣ್ಣಲ್ಲಿ ನೀರು ಗಳಗಳನೆ ಬರಹತ್ತಿದವು. ಆಗ ಜಯಸಿಂಹನು ತಿರಸ್ಕಾರದಿಂದ “ ಅಳು ಚನ್ನಾಗಿ ಅಳು ಕಣ್ಣಲ್ಲಿ ಒಂದು ಹನಿ ನೀರು ಉಳಿಯದಂತೆ ಶೋಕಿಸು. ಇದೇ ಹಿಂದೂ ಧರ್ಮದ ಉದ್ದೇಶ. ಆ ಪವಿತ್ರ ಸಾಧನೆಯನ್ನೇ ನೀನು ನಡಿಸಿರುವೆ ” ಇವರ ಪ್ರತಿಯೊಂದು ನುಡಿಗಳಿಂದ ಉಳಿದ ಜನರ ಹೃದಯವು ಭೇದಿಸುತ್ತಿದ್ದರೂ ಮಾತಾಡುವ ಧೈರ್ಯವು ಯಾರಿಗೂ ಇದ್ದಿಲ್ಲ. ಯಾಕಂದರೆ ಅವನು ಬಾದಷಹನೆದುರಿಗೆ ಪ್ರೀತಿಪಾತ್ರನಾಗಿದ್ದನಲ್ಲದೆ ಹಿಂದೂ ಜನರ ಬಗ್ಗೆ ಏನಾದರೂ ತೀರ್ಪು ಕೊಡುವದಿದ್ದರೆ, ಬಾದಷಹನು ಅವನನ್ನೇ ಮುಂದು ಮಾಡುತ್ತಿದ್ದನು. ಆಗ ಆ ತರುಣನು ನಮ್ರ ಭಾವದಿಂದ “ ಧನ್ಯ ಜಯಸಿಂಹಾ, ಒಂದು ಹಿಡಿ ಮಣ್ಣಿನಷ್ಟಿರುವ ಮಾನವರು, ನಿನ್ನಂತಹ ಶೂರ ಸರದಾರರ ಬೆಂಬಲದಿಂದ ಭಾರತದ ಸಮ್ರಾಟರೆನ್ನಿಸಿ ಕೊಳ್ಳುತ್ತಿರುವರೆಂದ ಮೇಲೆ ಅವರೇ ಧನ್ಯರಲ್ಲವೇ ? ಎಲೋ ಯಾವನು ರಣಹೇಡಿಯಾಗಿ ಕುಳಿತಂಥ ಅರ್ಜುನನನ್ನು ತನ್ನ ಜ್ಞಾನಾಮೃತದಿಂದ ಉಪದೇಶಿಸಿ, ಅವನನ್ನು ಕಾರ್ಯಕ್ಕೆ ಹಚ್ಚಿದ ಬೋಧನೆಯಗಿಂತಲೂ, ಕುರಾನವು ಮೇಲೆನಿಸಿತಲ್ಲವೇ ? ಅವರ ಧರ್ಮಸ್ಥಾಪಕರಾದ ಪೈಗಂಬರನು ನನಗೂ ಮಾನ್ಯನಿದ್ದಾನೆ. ಅವನ ಜೀವನದ ಪ್ರತಿಯೊಂದು ಘಟನೆಯು ನಿನಗೆ ಸ್ಫೂರ್ತಿಯನ್ನು ಕೊಡುವಂತಿದೆ. ಆದರೆ ಯಾವ ಪ್ರತಾಪಸಿಂಹನು, ಅವರ ವಂಶಜನಾದ ಅಕಬರ ಬಾದಷಹನಸಮ್ರಾಟತ್ವವನ್ನು ಒಪ್ಪಿಕೊಳ್ಳದೆ, ಅರಣ್ಯದಲ್ಲಿ ತನ್ನ ಮಕ್ಕಳು ‘ದೇಹಿ, ದೇಹಿ’ ಎಂದು ಒದರುತ್ತಿರಲು, ಅಧೈರ್ಯ ಹೊಂದದೆ ಸಾಯುವತನಕ ‘ ಚಿತೋರ, ಚಿತೋರ ’ ವೆಂದು ಪ್ರಾಣ ನೀಡಿದ ಮಹಾತ್ಮನಿಗೆ ನೀನು ಕಲಂಕವನ್ನು ಹಚ್ಚುತ್ತಿರುವೆ. ನಿಜವಾಗಿಯೂ ಭಾರತ ಜನನಿಯು ನಿನ್ನಂತಹ ಧರ್ಮ-ಕುಲಾಂಗರನ್ನು ಹಡೆಯುವದಕ್ಕಿಂತ, ಬಂಜೆಯಾಗಿರುವದೇ ಲೇಸು. ನಿನ್ನಂತಹ ಪಾಪಾತ್ಮನಿಗೆ ಇನ್ನು ಇದ

ಕ್ಕಿಂತಲೂ ಹೆಚ್ಚಿಗೆ ಹೇಳಿ ಅದರ ನಿಂದೆಯನ್ನು ಈ ಕಿವಿಯಿಂದ ಕೇಳ ಬಾರದೆಂದು ಬಯಸುತ್ತೇನೆ ” ಎಂದವನೇ ಒಮ್ಮೆಲೇ ಹೊರಗೆ ಬಂದು ಕುದುರೆಯನ್ನು ಹತ್ತಿಕೊಂಡು ಹೋಗಿ ಬಿಟ್ಟನು.

ನಂತರ ಆ ಜಯಸಿಂಹನು ಬೆಪ್ಪಾಗಿ ಅಲ್ಲಿಯೇ ಕುಳಿತು ಬಿಟ್ಟನು. ನಂತರ ಉಳಿದವರೂ ಒಬ್ಬೊಬ್ಬರೇ ಸಾವಕಾಶವಾಗಿ ನಡೆದರು. ಆ ತರುಣನ ಒಂದೊಂದೇ ಮಾತುಗಳು ಜಯಸಿಂಹನ ಹೃದಯವನ್ನೇ ಕೊರೆದವು. ಇದರಿಂದ ಖಾನು ಶಿವಾಜಿಗೆ ಮಾಡಿದ ಅನ್ಯಾಯವೂ, ಹಾಗೂ ಆ ಅನ್ಯಾಯಕ್ಕೆ ಸೊಪ್ಪು ಹಾಕದ ಅವನ ಕೃತಿಯೂ ನೆನಪಿ, ಆತನೂ ಮತ್ತಾರೂ ಆಗಿರದೆ ಭಗವಾನ ಶಿವನ ಅವತಾರವೇ ನಿಶ್ಚಯವೆಂದು ತಿಳಕೊಂಡನು. ಈ ಪಾಪಕ್ಕಾಗಿ ಅವನ ಕಣ್ಣುಗಳಲ್ಲಿಯೂ ನೀರೂರಿದವು. ಅಷ್ಟರಲ್ಲಿ ಒಬ್ಬ ಮುಸಲ್ಮಾನೀ ಹೆಂಗಸು ಅಲ್ಲಿಗೆ ಬಂದು “ ಬಾದಶಹರು ನಮಾಜಗಾಗಿ ಮಸೀದೆಗೆ ಹೋಗಿದ್ದಾರೆ. ಹಾಗೂ ತಮ ಗಾಗಿ ಕಾದಿದ್ದಾರೆ ” ಎಂದಳು. ಆ ಹೆಂಗಸಿನ ಮಾತಿಗೂ ನೋಟಕ್ಕೂ ಕಾಮವಿಲಾಸಿ ಜಯಸಿಂಹನು ಮರುಳಾಗಿ ಆಕೆಯ ಮುಗುಳ್ನಗೆಗೆ ಅವರು ನಗೆ ಕೂಡಿಸಿ, ದೇವಸ್ಥಾನದ ಹೊರಗೆ ಬಂದು ಆಕೆಯ ಕೈಯನ್ನು ಹಿಡಿದು, ದೇವರ ಮೂರ್ತಿಯ ಕಡೆ ನೋಡಿ “ ಇವೇನು ಕಲ್ಲು ದೇವರುಗಳು ” ಎಂದನು. ನಂತರ ಆಕೆಯನ್ನು ಕುದುರೆಯ ಮೇಲೆ ಕೂಡ್ರಿಸಿಕೊಂಡು, ಅವಳ ಹಿಂದೆ ತಾನೂ ಕುಳಿತು ನಡೆದನು.

## ೧೧

ಈ ಪ್ರಕಾರ ದಿಲ್ಲಿಯ ವಾತಾವರಣವಿರಲು, ಇನ್ನು ಮೇವಾ ಡದ ಬಗ್ಗೆ ಹೊರಳೋಣ. ಸೇನಾಪತಿ ಅಕಬರಖಾನನು ತನ್ನ ಜನರಿಗೆ ಆ ಹುಡುಗರ ಮೇಲೆ ಲಕ್ಷ್ಯವಿಡಲು ಹೇಳಿದ್ದನೆಂಬುದು

ಹಿಂದಿನ ಪ್ರಕರಣದಲ್ಲಿ ಹೇಳಿದ್ದೇನೆ. ಅದರಂತೆಯೇ ಅವರಾದರೂ ಬಹಳ ಜಾಣತನದಿಂದ ಎಲ್ಲರ ಮೇಲೂ ಕಣ್ಣಿಟ್ಟಿದ್ದರು. ಇವರ ಈ ಸಂಶಯವು ಕೆಲವು ದಿನಗಳಲ್ಲಿ ರಮೇಶನಿಗೂ ಗೊತ್ತಾಗಿ, ತನ್ನ ಗೆಳೆಯರಿಗೂ ಎಚ್ಚರಿಕೆಯಿಂದ ವರ್ತಿಸಬೇಕೆಂದು ಹೇಳಿಟ್ಟಿದ್ದನು.

ಇತ್ತ ವಿಜಯಕುಮಾರನೂ ಬಂದು ದಿನಗಳಾಗಿದ್ದರಿಂದ ಲೀಲಾವತಿಗೂ ಅವನಿಗೂ ಪರಸ್ಪರ ಸಂಬಂಧವಾಗಿ, ದಿನೇ ದಿನೇ ಪ್ರೇಮದ ಆಶಾಂಕುರವು ಬೆಳೆಯತೊಡಗಿತು. 'ಇವರ ಪ್ರೇಮವನ್ನು ರಮೇಶ ಮೊದಲಾದವರಿಗೂ ಗೊತ್ತಾಗಿತ್ತು. ಆದರೆ ಅಡ್ಡಿ ಮಾಡಲು ಬಯಸಲಿಲ್ಲ. ಈ ಪ್ರಕಾರ ದಿನಗಳು ಕಳೆಯುತ್ತಿರಲು, ಒಂದು ದಿನ ರಾತ್ರಿ ಊಟವಾದ ಮೇಲೆ ವಿಜಯನು ಅಡ್ಡಾಡಲು ಹೊರಟಿದ್ದನು. ಆ ದಿನ ಪೂರ್ಣಿಮೆಯ ರಾತ್ರಿ ಇದ್ದುದರಿಂದ, ಹಿಟ್ಟು ಚೆಲ್ಲಿದ ಹಾಗೆ ಬೆಳದಿಂಗಳು ಬಿದ್ದಿತ್ತು. ಇದರಿಂದ ಅವನ ಮನಸ್ಸಿಗೆ ಅಲ್ಹಾದವೆನಿಸಿ, ಸೊಗಸಾದ ಹಾಡುಗಳನ್ನು ಹಾಡುತ್ತ ಕುಳಿತಿದ್ದನು. ಅಷ್ಟರಲ್ಲಿ ತನಗಿಂತಲೂ ಇಂಪಾದ ಒಂದು ಪ್ರೇಮ ಮಧುರ ಗಾನವು ಅವನಿಗೆ ಕೇಳಬರಹತ್ತಿತು. ಅದನ್ನು ಅವನು ಒಳ್ಳೇ ಪ್ರೀತಿಯಿಂದ ಕೇಳಹತ್ತಿದನು. ಇಷ್ಟರಲ್ಲಿ ಆ ಹಾಡುವ ವ್ಯಕ್ತಿಯು ಅವನ ಕಣ್ಣೆದುರಿಗೆ ಬಂದು ನಿಂತಿತು. ಅವಳು ಮತ್ತಾರೂ ಆಗಿರದೆ, ಬಾದಷಹನ ಸ್ವಪ್ನದ ರಾಣಿಯಾದ ಲೀಲಾದೇವಿಯೇ ಆಗಿದ್ದಳು. ಅವಳು ಅವನ ಪಕ್ಕದಲ್ಲಿ ಕುಳಿತು "ವಿಜಯಾ, ನನಗೂ ತಿಳಿಸಿದ್ದರೆ, ನಾನೇನು ಅಡ್ಡಿ ಮಾಡುತಿದ್ದೆನೇ?" ಎನ್ನಲು ವಿಜಯನು "ಇಲ್ಲಿ ರಾಜಕುಮಾರೀ ಊಟವಾದನಂತರ ಏಕೋ ಮನಸ್ಸಿಗೆ ಬೇಜಾರ ಬಂದಿತು. ಪೌರ್ಣಿಮೆಯ ದಿನವಾದ್ದರಿಂದ ಸ್ವಲ್ಪ ಅಡ್ಡಾಡೋಣವೆಂದು ಬಂದೆ." ಆಗ ಲೀಲಾದೇವಿಯೂ ಚಂದ್ರನ ಕಡೆಗೆ ನೋಡಿದಳು. ಒಂದು ಕರಿಯ ಮೋಡವು ಚಂದ್ರನನ್ನು ಸೆರೆ ಹಿಡಿಯಲು ಬರುತ್ತಿರುವದು ಅವಳಿಗೆ ಕಾಣಿಸಿತು. "ಈಗ ಇಷ್ಟು ಶೋಭೆಯಿಂದ ಕಂಗೊಳಿಸುತ್ತಿರುವ

ಚಂದ್ರನೂ ಮೋಡಗಳ ಸೆರೆಯಾಳಾಗುವನಲ್ಲವೇ?" ಅದಕ್ಕೆ ವಿಜಯನು "ಅಹುದು ಲೀಲಾ, ಮಾನವನ ಸ್ಥಿತಿಯೂ ಚಂದ್ರನಂತೆಯೇ ಇದೆ. ಇಂದು ಸುಖಿಯಾಗಿದ್ದವನು ನಾಳಿಗೆ ದುಃಖಿ. ಇಂದು ಲಕ್ಷ್ಮಾಪತಿಯಾದವನು ನಾಳೆ ಭಿಕ್ಷಾಪತಿ. ಇಂದಿನ ಜನನವೇ ನಾಳಿನ ಮರಣ." ಆಗ ಲೀಲೆಯು "ಅದೆಲ್ಲವೂ ನಿಜ. ಆದರೆ ಎಲ್ಲಿಯೂ ಮೋಡಗಳಿಲ್ಲದ ಮೂಲಕ, ಇಲ್ಲಿಯೇ ಚಂದ್ರನನ್ನು ಮುಸುಕಿದ್ದು ಖೇದವಲ್ಲವೇ? ಆದ್ದರಿಂದ ಇದು ಸಂಕಟದ ಸೂಚಕವೇ ಇರಬಹುದೆಂದು ನನಗೆನಿಸುತ್ತದೆ" ಎಂದಳು. ಈ ಮಾತಿಗೆ ವಿಜಯನು ಮುಗುಳ್ನಗೆ ನಕ್ಕು "ಲೀಲಾ, ಸಂಕಟಗಳಿಗೆ ಅಂಜಿದರೆ ಹೇಗೆ? ಒಂದು ವೇಳೆ ನಾನು ಅಂಜಿ ಹಾಗೆಯೇ ಹೋದರೆ 'ವಿಜಯಿಭವ' ಎಂದು ಹರಸಿದ ನನ್ನ ಮಾತೆಗೂ ಹಾಗೂ ಮಹಾರಾಣಾರವರಿಗೂ ಕಲಂಕವನ್ನು ಹಚ್ಚಿದಂತಾಗಲಿಲ್ಲವೇ?" ಈ ಆವೇಶದ ನುಡಿಗಳಿಂದ ಲೀಲೆಯ ಕಣ್ಣಲ್ಲಿ ನೀರೂರಿದವು. ಅದನ್ನು ವಿಜಯನು ನೋಡಿ, ಅವಳ ಕಣ್ಣೀರನ್ನು ಒರೆಸಿ "ಲೀಲೆ, ನಿನ್ನ ಕಣ್ಣೀರಿನ ರಕ್ಷಣೆಯನ್ನು ಮಾಡುವ ಆ ಪರಮಾತ್ಮನಿದ್ದಾನೆ ಅಂಜಬೇಡ." ಆಗ ಲೀಲೆಯು ನಗುತ್ತ "ಎಂದು ಆ ಪರಮಾತ್ಮನು, ನಮ್ಮನ್ನು ಈ ಸಂಕಟದಿಂದ ಮುಕ್ತಗೊಳಿಸಿ, ನನ್ನ ತಂದೆಯು ಸಂತೋಷದಿಂದ ನಿಮಗೆ ಧಾರೆಯೆರೆದು ಕೊಡುವನೋ ಮತ್ತು ನಾನೂ ನೀವೂ ಪತಿ-ಪತ್ನಿಯರಾಗಿ, ಇಂತಹ ಪ್ರಶಾಂತ ವಾತಾವರಣದಲ್ಲಿ ಕೂಡಿರುವ ಈ ಬೆಳದಿಂಗಳಿನಲ್ಲಿ ಇದೇ ಪ್ರಕಾರ ಎಂದು ಕುಳಿತುಕೊಳ್ಳುವೆವೋ ಎಂಬ ಭವಿಷ್ಯವನ್ನು ಕಾಣುತ್ತಲಿದ್ದೇನೆ" ಎಂದಳು.

ಅಷ್ಟರಲ್ಲಿ ಅವರಿಬ್ಬರಿಗೂ ಕುದುರೆಯ ಸಪ್ಪಳವು ಕೇಳಬರಹತ್ತಿ ಐದಾರು ಜನ ಕುದುರೆಯ ಸವಾರರು ಕಾಣಿಸಹತ್ತಿದರು. ಆ ಕುದುರೆಯ ಸವಾರರು ಮತ್ತಾರೂ ಆಗಿರದೆ ಸೇನಾಪತಿ ಅಕಬರಖಾನ ಹಾಗೂ ಅವನ ಸಂಗಡಿಗರಿದ್ದರು. "ವಿಜಯಕುಮಾರ ಹಾಗೂ

ಲೀಲಾದೇವಿಯು ಹೊರಗೆ ಅಡ್ಡಾಡಲು ಹೋಗಿದ್ದಾರೆ" ಎಂಬ ಮಾತನ್ನು ಅಜಿತನಿಂದ ರಮೇಶನಿಗೆ ಹೇಳಿದ್ದನ್ನು ಕೇಳಿ ಹುಡುಕಾಡಲು ಬಂದಿದ್ದರು. ಅವರಲ್ಲಿ ಒಬ್ಬನು ದೂರದಿಂದ ದಿಟ್ಟಿಸಿ ನೋಡಿ, "ಸೇನಾಪತಿಗಳೇ, ಅಗೋ ನೋಡಿ ಅಲ್ಲಿ ಕುಳಿತಿರುವರೇ ಆ ಹರಾಮಖೋರರು" ಎಂದನು. ಅವರನ್ನು ಅಕಬರಖಾನನೂ ನೋಡಿ ಗುರ್ತಿಸಿ "ಅಹುದು ಅವರೇ ನೀಚರು. ಬೇಗನೆ ನಡೆಯಿರಿ" ಎಂದು ಕುದುರೆಯನ್ನು ಓಡಿಸಿದವನೇ, ತಕ್ಷಣ ಅಲ್ಲಿ ಬಂದಿಳಿದನು. ಇದನ್ನು ವಿಜಯನು ನೋಡಿ "ಲೀಲೆ, ಘಾತವಾಯಿತು" ಎಂದನು. ಅಕಬರಖಾನನು ಈ ಮಾತನ್ನು ಕೇಳಿ "ಘಾತ! ಕುಮಾರರೇ, ತಮ್ಮ ಏಕಾಂತದಲ್ಲಿ ನಾನು ಬಂದದ್ದು ಘಾತವಾಯಿತಲ್ಲವೇ? ನಾನೇನು ನಿನಗೆ ಮಾಡುವೆನೆಂದು ಅನಿಸಿರಬಹುದು. ಆದರೆ ನಿಮ್ಮ ಹಿಂದೂ ಧರ್ಮಾಭಿಮಾನಿಯಾದ ಸನ್ಯಾಸಿ ಬಂದು ಬೈರಾಗಿಯನ್ನು ಕೇಳಿದ್ದಿಯಾ? ಆತನ ಕಣ್ಣು ಕಿತ್ತಂತೆ ನಿನ್ನನ್ನು ತಕ್ಷಣ ಕೊಲ್ಲಿಸಿ ಬಿಡುವೆನು" ಎನ್ನಲು ವಿಜಯಕುಮಾರನು ನಸುನಕ್ಕು "ಖಾನಸಾಹೇಬರೇ, ಈ ತರದ ಅಂಜಿಕೆಯನ್ನು ನನ್ನ ಮುಂದೆ ಹೇಳಲು ಬಂದಿದ್ದೀರಾ? ಆದರೆ ತನ್ನ ಸಣ್ಣ ಮಗನು ಕೂಡ ಹಲಾಹಲ ಹೊಂದುತ್ತಿರುವದನ್ನು ನೋಡಿ ಸಹಿಸಿ, ತನ್ನ ದೇಶ, ಧರ್ಮ, ಮಾತೆಯು ಸಲುವಾಗಿ ಸ್ವರ್ಗಸೋಪಾನವನ್ನೇರಿದ ವಂಶಜನೇ ನಾನಿದ್ದೇನೆ. ಅವನಿಂದಲಾದರೂ ಹಿಂದುಗಳು ಮೃತ್ಯುವನ್ನು ಆಲಿಂಗಿಸಿಕೊಳ್ಳುವರೆಂದು ತಿಳಿದುಕೋ, ಇದೂ ಅಲ್ಲದೆ ನಿಮ್ಮ ಅನ್ಯಾಯುಗಳಿಗೆ ಮಣ್ಣು ಮುಕ್ಕಿಸುತ್ತಿರುವ, ಆ ವೀರ ಶಿವಾಜಿಯ ರಕ್ತವೇ ಎನ್ನ ನಾಡಿ ನಾಡಿಗಳಲ್ಲಿ ಹರಿಯುತ್ತದೆ. ಆದರೆ ನಿನ್ನಂತಹ ಕ್ಷುದ್ರ ಮಾನವನಿಗೆ ಅಂಜಿ ನತಮಸ್ತಕವಾಗುವವನು ನಾನಲ್ಲ" ಎನ್ನಲು ಖಾನನು ದರ್ಪದಿಂದ "ಹೀಗೋ, ಹಾಗಾದರೆ ನಿನ್ನ ರುಂಡವನ್ನು ಇಲ್ಲಿಯೇ ಕೊಯ್ದು ಅದನ್ನು ಆ ಗುಡ್ಡದ ಇಲಿಗೆ ಕಳುಹಿಸಿ ಕೊಡುತ್ತೇನೆ." ಇದರಿಂದ

ವಿಜಯನು ಮತ್ತಿಷ್ಟು ನಗಲಾರಂಭಿಸಿ "ಆ ಗೋಬ್ರಾಹ್ಮಣರ ಪಾಲಕನಾದ ಶಿವಾಜಿಯು ಗುಡ್ಡ ಇಲಿಯೇ? ಆತನ ವೀರನ ಪ್ರತಾಪವು ನಿನಗಿನ್ನೂ ಗೊತ್ತಾಗಿಲ್ಲವೇ? ಆಗಲಿ. ಖಾನಸಾ ಹೇಬಾ, ಹುಟ್ಟಿದ ಮಾನವನು ಒಂದಿಲ್ಲೊಂದು ದಿನ ಸಾಯಲೇ ಬೇಕಷ್ಟೇ. ಆದರೆ ನನ್ನ ಶಿರಚ್ಛೇದನದಿಂದ ಬೀಳುವ ಒಂದೊಂದು ರಕ್ತದ ಹನಿಯಿಂದ, ಒಬ್ಬೊಬ್ಬ ವೀರರು ಹುಟ್ಟಿ ನಿಮ್ಮಂಥ ದೈತ್ಯರ ರಕ್ತವನ್ನು ಹೀರುವರೆಂದು ತಿಳಿ. ಇದರಿಂದ ಆ ವೀರ ಶಿವಾಜಿಗೆ ಮತ್ತಿಷ್ಟು ಸ್ಫೂರ್ತಿ ಸಿಕ್ಕಿ, ಈ ಭರತ ಭೂಮಿಯಲ್ಲಿ ನಿಮ್ಮಂಥ ದುಷ್ಟರ ಹೆಸರೇ ಇಲ್ಲದಂತೆ ಮಾಡುವನು" ಎಂದನು. ಆಗ ಆ ಖಾನನು ಕುಮಾರಿಯ ಕಡೆಗೆ ನೋಡಿ "ರಾಜಕುಮಾರೀ, ನೀನು ದಿಲ್ಲಿಯ ಬಾದಷಹನ ಬೇಗಮಳಾಗುವೆಂಬುದನ್ನು ಮರೆತಂತೆ ಕಾಣುತ್ತದೆ. ಆದರೆ ಹಿಂದೂ ಧರ್ಮವನ್ನು ತ್ಯಜಿಸಿದ್ದರ ಸಲುವಾಗಿ ಇಲ್ಲಿಯೇ ಪ್ರತಿಜ್ಞೆ ಮಾಡಿದರೆ ಮಾತ್ರ ನಿನ್ನನ್ನು ಬಿಡುವೆನು. ಇಲ್ಲವಾದರೆ ನನ್ನ ಮೇಣೆಯು ಬರುವವರೆಗೆ ನಿಮ್ಮಿಬ್ಬರನ್ನು, ನನ್ನ ನಜರಖಾನೆಯಲ್ಲಿ ಡುವೆನು" ಎಂದು ಗದ್ದರಿಸಿದನು. ಆಗ ಆ ರಾಜಕುಮಾರಿಯು "ಖಾನಸಾಹೇಬರೇ, ನನ್ನ ಧರ್ಮದಸಲುವಾಗಿ ಪ್ರಥಮ ಬಲಿದಾನ ಮಾಡಿದ ಮಾತಾ ಪದ್ಮಿನಿದೇವಿ ಮೊದಲಾದವರ ರಕ್ತವೇ ಎನ್ನಲ್ಲಿ ಸೇರಿದೆ. ಈ ರಕ್ತದಲ್ಲಿ ನಿಮ್ಮ ರಕ್ತವೆಂದಿಗೂ ಸೇರಲಾರದು. ನನ್ನ ಪ್ರಾಣಕ್ಕಿಂತಲೂ ನನ್ನ ಧರ್ಮವು ಶ್ರೇಷ್ಠವಿದೆ. ಇದಕ್ಕಿಂತಲೂ ಹೆಚ್ಚಿಗೆ ಈ ಅಬಲೆಯು ಏನನ್ನೂ ಹೇಳಲಾರಳು! ಈ ಮಾತಿಗೆ ಖಾನನು ಕ್ರೋಧದಿಂದ, "ಎಲೋ, ಕ್ಷುದ್ರ ಜೀವಿಗಳಿರಾ! ನಿಮ್ಮನ್ನು ಶಗಣೆಯಿಂದ ಹೊರಗೆ ತೆಗೆಯಲು ಹೋದರೆ, ತಿರುಗಿ ಶಗಣೆಯಲ್ಲೇ ಬೀಳುವಿರಲ್ಲ ಆಗಲಿ. ನಿಮ್ಮ ಫಲವನ್ನು ಅನುಭೋಗಿಸಿರಿ" ಎಂದು ಅವರನ್ನು ಬಂಧಿಸಿ ಕರಕೊಂಡು ನಡೆದನು.

ರಾತ್ರಿ ಸುಮಾರು ಹತ್ತು ಗಂಟೆಯಾಗಿರಬಹುದು. ಮಹಾರಾಣಾ ಶಾರ್ದೂಲಸಿಂಹರು ಹೊರಗೆ ನಿಂತಿದ್ದಾರೆ. ಅಷ್ಟರಲ್ಲಿ ಖಾನನು ಅವರನ್ನು ಕರಕೊಂಡು ಬಂದು ರಾಣನೆದುರಿಗೆ ನಿಲ್ಲಿಸಿದನು. ನಂತರ ಅಕಬರಖಾನನು ನಡೆದ ವಿಷಯವೆಲ್ಲವೂ ಸವಿಸ್ತಾರವಾಗಿ ಹೇಳಿದನು. ಇದನ್ನು ಮಹಾರಾಜನು ಕೇಳಿ ಸಿಟ್ಟಿನಿಂದ "ಎಲೈ ನೀಚಳೇ ಇಲ್ಲಿಯವರೆಗೆ ನಿನ್ನನ್ನು ಸಲುಗೆಯಿಂದ ಜೋಪಾನ ಮಾಡಿದ್ದರ ಪ್ರತಿಫಲವನ್ನು ಇದೇ ಕೊಟ್ಟೆಯಾ ? ಇಂತಹ ದುಷ್ಟರ ಸಹವಾಸದಿಂದ ಅಡ್ಡ ದಾರಿಯನ್ನು ತುಳಿದಿಯಾ ? '' ಈ ಮಾತಿಗೆ ಲೀಲಾದೇವಿಯು ಉತ್ತರ ಕೊಡದಿರಲು ಖಾನನು ನಗತೊಡಗಿದನು. ನಂತರ ರಾಣನಿಗೆ "ಮಹಾರಾಣಾ, ತಾವು ಚಿಂತಿಸಬೇಡಿ. ಈಕೆಯನ್ನು ನಾನು ಸರಿಪಡಿಸುವೆನು" ಎಂದನು. ಈ ಮಾತಿಗೆ ರಾಣನು "ಖಾನ ಸಾಹೇಬರೇ, ಈ ತರದ ಫಲವನ್ನು ನನಗೆ ಕೊಡುವ ನೀಚಳು ನನ್ನ ಮಗಳಾಗದೆ ವೈರಿಯಿದ್ದಾಳೆ ಹೋಗಿರಿ. ಈಕೆಯನ್ನು ನಿಮ್ಮ ವಶಕ್ಕೆ ಒಪ್ಪಿಸಿದ್ದೇನೆ." ಎಂದು ಅವಳ ಸಮ್ಮುಖದಲ್ಲಿಯೇ 'ಥೂ' ಎಂದು ಉಗುಳಿದನು. ಆಗ ವಿಜಯಕುಮಾರನು ಸಿಟ್ಟಿಗೆದ್ದು "ರಜಪೂತ ಕುಲಕ್ಕೆ ಕಲಂಕವನ್ನು ಹಚ್ಚುವ ಮಹಾತ್ಮನೇ, ಈ ಮಹನೀಯಳ ಪ್ರಭಾವವು ಮುಂದೆ ನಿನಗೆ ಗೊತ್ತಾಗುವದು" ಎನ್ನಲು ಮೊದಲೇ ಸಿಟ್ಟಿಗೆದ್ದ ರಾಣನು ಅವನ ಕಪಾಳಕ್ಕೆ ಹೊಡೆದನು. ಪಾಪ, ಇದೆಲ್ಲವನ್ನು ನೋಡುತ್ತಿದ್ದ ಆ ಕೋಮಲ ಹೃದಯದ ಲೀಲೆಗೆ ವಜ್ರಾಘಾತವಾದಂತಾಗಿ, ಒಮ್ಮೆಲೇ ಮೂರ್ಛೆ ಹೋದಳು. ಆದರೆ ಇದಾವದನ್ನೂ ಲಕ್ಷಿಸದೆ, ಆ ಖಾನನು, ಮಹಾರಾಣಾನಿಗೆ ಒಂದು ಕೋಣೆಯಲ್ಲಿಡ ಹೇಳಿ, ಅವರ ಸಲುವಾಗಿ ಸೇವಕ ಸೇವಕಿಯರನ್ನು ನೇಮಿಸಿ ಎಲ್ಲರೂ ರಾಜಗೃಹಕ್ಕೆ ಬಂದರು.

ಅದೇ ದಿನ ಮಧ್ಯ ರಾತ್ರಿಯ ಸಮಯವಾದರೂ ವಿಜಯಕುಮಾರ, ಲೀಲಾದೇವಿಯರು ಬಾರದ್ದನ್ನು ನೋಡಿ, ರಮೇಶನ

ಎದೆಯು ಧಸ್ಸೆಂದಿತು. ಇಬ್ಬರ ಝೋಲಿಗಳಲ್ಲಿಯೂ ಹುಡುಕಾಡಿವನು. ತನ್ನ ತಾಯಿಯನ್ನು ಬೆದರಿಸಿ ಕೇಳಿದನು. ಆದರೂ ಅವನಿಗೆ ವರ್ತಮಾನವು ಹತ್ತಲಿಲ್ಲ. ಕಡೆಗೆ ತನ್ನ ತಂದೆಯ ಬಳಿಗೆ ಬಂದನು. ಆಗ ಮಹಾರಾಣನು "ಬಾ ಮಗೂ. ಬಾದಷಹನ ಪ್ರತಿನಿಧಿಯಾದ, ಈ ಖಾನಸಾಹೇಬರು ಬಂದಾಗಿನಿಂದ ಒಂದು ದಿವಸವೂ ನೆಟ್ಟಗೆ ಮಾತಾಡಿಲ್ಲ. ಇನ್ನು ಮೇಲೆ ನೀನೂ ಬಾದಷಹರ ಅಧೀನನಾಗಿ ನಡೆ." ಅದಕ್ಕೆ ಖಾನನೂ ಸಮ್ಮತಿಯನ್ನು ಕೊಡುತ್ತ "ಅಹುದು ಕುಮಾರರೇ, ನಮ್ಮ ಬಾದಷಹರ ಆಧೀನದಲ್ಲಿ ನಡೆಯುವದರಿಂದ ಸಕಲ ವೈಭವಗಳೂ ನಿಮ್ಮ ಪಾದಕ್ಕೆ ಬೀಳುವವು" ಎಂದನು. ಇದರಿಂದ ಸಿಟ್ಟಿಗೆದ್ದ ರಮೇಶನು "ಖಾನಸಾಹೇಬರೇ, ನಮ್ಮ ದೇಶದಲ್ಲಿ ಯಾವ ವೈಭವಕ್ಕೆ ಕೊರತೆಯಿದೆ. ನಮ್ಮದೇ ಸಂಪತ್ತನ್ನು ಕಸಗೊಂಡು, ತಿರುಗಿ ನಮ್ಮ ಮೇಲೆಯೇ ಅನ್ಯಾಯವೇ? ಆದರೆ ಆಬಾಜೀ, ಈಗ ಸದ್ಯಕ್ಕೆ ನಾನು ಆ ವಿಷಯವನ್ನು ಚರ್ಚಿಸಲು ಬಂದಿಲ್ಲ. ನನ್ನ ತಂಗಿಯಾದ ಲೀಲೆಯನ್ನು ಎಲ್ಲಿಟ್ಟಿದ್ದೀರಿ, ಹೇಳಬೇಕು?" ಎನ್ನಲು ಖಾನನ ಹೃದಯವು ಧಸ್ಸೆಂದಿತು ಖಾನನೂ, ಮಹಾರಾಣನೂ ಒಂದೇ ಸವನೆ ಮುಖವನ್ನು ನೋಡತೊಡಗಿದರು. ಇದರಿಂದ ರಮೇಶನ ಸಂಶಯವು ಮತ್ತಿಷ್ಟು ಹೆಚ್ಚಿಗೊಂಡಿತು. ಇವರು ಗಾಬರಿಯಾಗಿದ್ದನ್ನು ಒಬ್ಬ ಸರದಾರನು ನೋಡಿ ದಣಿದವರಂತೆ ಒಮ್ಮೆಲೇ ಹಿಂದಿನಿಂದ ಬಂದು "ಮಹಾರಾಣಾ, ಆ ನೀಚನು ನಮ್ಮ ಕೈಗೆ ಸಿಕ್ಕದೆ, ಒಮ್ಮೆಲೇ ಕುಮಾರಿಯನ್ನು ಹತ್ತಿ ಎಲ್ಲಿಯೋ ಸೇರಿ ಬಿಟ್ಟನು. ಎಷ್ಟು ಹುಡುಕಿದರೂ ಸಿಗಲಿಲ್ಲ" ಎಂದು ಮೋಸ ಮಾಡಿದನು. ಆದರೆ ಈ ಮೋಸತನದ ಕೃತ್ಯವು ಅವನಿಗೆ ಗೊತ್ತಾಗಿ "ಖಾನಸಾಹೇಬರೇ, ನದಿಯ ಪ್ರವಾಹಕ್ಕೆ ಒಡ್ಡನ್ನು ಹಾಕ ಹೋದರೆ ಅದರ ಗತಿಯು ಮಂದವಾಗದೆ, ಮತ್ತಿಷ್ಟು ರಭಸದಿಂದ ಆ ಒಡ್ಡನ್ನು ಒಡೆದುಕೊಂಡು ಹೋಗುವದು ಆದರೆ ಜೋಕೆ" ಎಂದು

ಆವೇಶದಿಂದ ಹೇಳಿ ಹೊರಟನು. ಆತನ ಆವೇಶದ ಮಾತುಗಳೂ, ಕೆಂಪಾದ ಕಣ್ಣುಗಳೂ, ನಡೆಯುವಿಕೆಯೂ, ಖಾನನೂ ರಾಣನೂ ನೋಡಿ ಬೆಪ್ಪಾಗಿ ಕುಳಿತುಬಿಟ್ಟರು.

೧೨

ಅಕಬರಖಾನನು ವಿಜಯಕುಮಾರ, ಲೀಲಾವತಿಯನ್ನು ಸೆರೆಯಲ್ಲಿಟ್ಟನಂತರ, ಅವರ ಮನವೊಲಿಸುವದಕ್ಕಾಗಿ ವಿಜಯನ ಬಳಿ ದಿನಾಲು ಓಡಾಡಹತ್ತಿದನು. ಆದರೆ ಅವನ ನಮ್ರ ಅಥವಾ ಬೆದರಿಕೆಯ ಮಾತುಗಳಿಗೆ, ಆ ವಿಜಯಕುಮಾರನು ಖಂಡತುಂಡವಾಗಿ ಉತ್ತರ ಕೊಡುತ್ತಿದ್ದನು. ಇವನ ಈ ಧೈರ್ಯವನ್ನು ಕಂಡು, ಅವನನ್ನು ಪಹರೆ ಮಾಡುತ್ತಿದ್ದ ಸೇವಕನೂ ಆಶ್ಚರ್ಯನಾಗುತ್ತಿದ್ದನು. ಆದರೆ ಪ್ರಾಣದಾಶೆಯಿಂದ ವಿಜಯನ ಮಾತುಗಳನ್ನು ದಿಕ್ಷಿಸುತ್ತಿರಲಿಲ್ಲ. ಇದರಿಂದ ವಿಜಯನು ಏನನ್ನೂ ಮಾಡಲಾರದೆ ನಿಸ್ಸಹಾಯನಾಗಿದ್ದನು.

ಆದರೆ ಭಾಗ್ಯ-ಸೂರ್ಯನು ಸದಾವಕಾಲದಲ್ಲಿಯೂ ಮರೆಯಲ್ಲಿರುವದಿಲ್ಲ. ಇದರಂತೆ ಒಂದು ದಿವಸ ಅವರ ಸ್ವಲ್ಪ ಭಾಗ್ಯವೂ ತೆರೆಯಿತೆನ್ನಲು ಅಡ್ಡಿಯಿಲ್ಲ. ಒಂದು ದಿವಸ ಚಂಪಾದೇವಿಯು ಆ ಸೆರೆಮನೆಯ ಎದುರಿನಿಂದ ನೀರಿಗೆ ಹೋಗುತ್ತಿರುವಾಗ, ಇವಳ ಗೆಳತಿಯಾದ ದಾಸಿಯೊಬ್ಬಳು ಭೆಟ್ಟಿಯಾಗಿ ಈ ವಿಷಯವನ್ನು ಅರುಹಿದಳು. ಚಂಪಾದೇವಿಯು ನಮ್ರ ಭಾವದಿಂದ ಅವಳ ಸಮವಸ್ತ್ರಗಳನ್ನು ಇಸಗೊಂಡು ಆ ಸ್ಥಳದಲ್ಲಿ ಆಕೆಯನ್ನು ಕೂಡ್ರಿಸಿ ತಾನು ಬಂದಳು. ಆ ದಿನ ಹೊಸ ದಾಸಿಯು ಬಂದದ್ದನ್ನು, ಅಕಬರ ಖಾನನು ನೋಡಿ, ಮುಗುಳ್ನಗೆ ನಗಲಾರಂಭಿಸಿದನು. ಆದರೆ ಚಂಪಾದೇವಿಯು “ ಖಾನ ಸಾಹೇಬರೇ ಎಚ್ಚರಿಕೆ ” ಎಂದವಳೇ ಮುಂದೆ ನಡೆದು ಬಿಟ್ಟಳು. ಆಗ ಖಾನನೂ ಮಹಾರಾಣಾರವರ ಕಡೆಯಿಂದ

ಕರೆ ಬಂದದ್ದರಿಂದ ಹೋಗಿ ಬಿಟ್ಟನು. ಇಂತಹ ಸುಸಂಧಿಯನ್ನು ದೊರಕಿಸಿಕೊಂಡ ಚಂಪಾದೇವಿಯು, ಒಮ್ಮೆಲೇ ಲೀಲೆಯ ಕೋಣೆ ಯಲ್ಲಿ ಹೊಕ್ಕಳು. ಆಗ ಅವಳು ಪಲಂಗದ ಮೇಲೆ ಬಿದ್ದು ಅಳು ತ್ತಿದ್ದಳು. ಇದನ್ನು ಚಂಪಾದೇವಿಯು ನೋಡಿ “ ಕ್ಷತ್ರಿಯ ಪುರು ಷನ ಕೈ ಹಿಡಿಯುವ ನೀನು ಅಳುತ್ತ ಕೂತಿರುವೆಯಾ ? ಹಾಗಾ ದರೆ ನೀನು ಹುಟ್ಟಿದ್ದು ವ್ಯರ್ಥ. ” ನಂತರ ಲೀಲೆಯು ನೋಡಿ, ಒಮ್ಮೆಲೇ ಅವಳನ್ನು ಅಪ್ಪಿಕೊಂಡಳು. ಆಗ ಚಂಪಾದೇವಿಯು ಅವಳನ್ನು ಸಣ್ಣ ಹುಡುಗಿಯ ಹಾಗೆ ಮುದ್ದಿಡುತ್ತ “ ಲೀಲೇ, ಕ್ಷತ್ರಿಯ ರಮಣಿಯಾಗಿ, ಕೇವಲ ಈ ಸೆರೆಮನೆಯ ಸಂಕಟಕ್ಕೆ ಅಂಜು ವದೇ? ಈ ಪ್ರಸಂಗವು ನಿನಗೆ ಜನ್ಮಾಂತರದಲ್ಲಿಯೂ ಬರಲಾರದು. ” ಆಗ ಲೀಲೆಯು ನಕ್ಕು “ ಅಕ್ಕಾ, ನಿನ್ನ ಆಗಮನದಿಂದ ಇನ್ನು ನಾನು ಸುದಿನಗಳನ್ನು ಕಾಣಬಹುದೆಂದು ಆಶಿಸುತ್ತೇನೆ. ಆದರೆ ನನ್ನ ಪ್ರಾಣದೊಡೆಯರ ಗತಿಯು ಏನಾಗಬಹುವೆಂದು ಯೋಚಿಸುತ್ತೇನೆ. ” ಆಗ ಚಂಪೆಯು “ ತಂಗೀ, ಅವರ ಚಿಂತೆಯನ್ನು ನೀನು ಬಿಡು. ಈಗ ನಾನು ಏನಾದರೊಂದು ಯುಕ್ತಿಯಿಂದ ಅವರನ್ನು ಕಾಣುತ್ತೇನೆ ಅಪ್ಪಣೆ ಕೊಡು ” ಎಂದವಳೇ ಹೊರಗೆ ಬಂದಳು.

ನಂತರ ವಿಜಯಕುಮಾರನನ್ನು ಪಹರೆ ಮಾಡುತ್ತಿದ್ದ ಸೇವಕ ನಿಗೆ “ ಮಹಾರಾಣಾರವರು ಒಳಗಿರುವ ಕೈದಿಗೆ ಒಂದು ಚೀಟಿ ಯನ್ನು ಕಳುಹಿಸಿಕೊಟ್ಟಿರುವರು. ಅದನ್ನು ಕೊಡಬೇಕಾಗಿದೆ ” ಎಂದಳು. ಈ ಮಾತನ್ನು ಪಹರೆಯವನು ನಂಬಿ, ಬಾಗಿಲನ್ನು ತೆರೆದು ಒಳಗೆ ಬಿಟ್ಟನು. ಹೀಗೆ ಅಕಸ್ಮಾತ ಚಂಪಾದೇವಿಯು ಬಂದು ದನ್ನು ವಿಜಯಕುಮಾರನು ನೋಡಿ, ಎದ್ದು ನಮಸ್ಕರಿಸಿದನು. ಆಗ ಚಂಪಾದೇವಿಯು ಎಬ್ಬಿಸಿ “ ವಿಜಯೀ-ಭವ ” ಎಂದು ಆಶೀರ್ವದಿ ಸಿದಳು. ನಂತರ ವಿಜಯನಿಗೆ ಹೊರಗಿನ ಎಲ್ಲ ವಿಷಯವನ್ನು ತಿಳಿಸಿ

" ವಿಜಯಕುಮಾರರೇ, ಇನ್ನು ಮೇಲೆ ನಿಮ್ಮ ಬಿಡುಗಡೆಯ ಸಿದ್ಧತೆಯನ್ನು ನಾನು ಮಾಡಿಸುವೆನು ಚಿಂತಿಸಬೇಡಿ " ಎಂದು ಅವನ ಅನುಜ್ಞೆ ಪಡೆದುಕೊಂಡು, ಮೊದಲಿನ ದಾಸಿಯ ಹತ್ತಿರ ಬಂದು ಅವಳ ನವ-ವಸ್ತ್ರಗಳನ್ನು ಕೊಟ್ಟು, ಆನಂದದಿಂದ ತನ್ನದೊಂದು ಉಂಗುರವನ್ನು ಕೊಟ್ಟು ಮನೆಗೆ ಬಂದಳು.

ಅದೇ ದಿನ ಮಧ್ಯಾಹ್ನ ರಾಜಶೇಖರನು ಊಟಕ್ಕೆ ಕುಳಿತಿದ್ದಾನೆ. ಅವನ ಅರ್ಧಾಂಗಿನಿಯು ಉತ್ಸಾಹದಿಂದ ನೀಡುತ್ತಿದ್ದಾಳೆ. ಆ ದಿನದ ಉತ್ಸಾಹವನ್ನು ರಾಜಶೇಖರನು ಕಂಡು ಕಾರಣವನ್ನು ಕೇಳಿದನು. ಆಗ ಅವಳು ಇಂದು ಮುಂಜಾನೆ ವಿಜಯಕುಮಾರ, ಲೀಲಾದೇವಿಗೆ ಭೆಟ್ಟಿಯಾದ ಸಂಗತಿಗಳನ್ನು, ಅವರಿರುವ ಸ್ಥಳವನ್ನು ತಿಳಿಸಿದಳು. ಇವಳ ಮಾತಿನಿಂದ ರಾಜಶೇಖರನಿಗೆ ಆನಂದವಾಗಿ ಅರ್ಧ ಕೆಲಸವಾದರೂ ಆಯಿತೆಂದು, ಬೇಗನೆ ಊಟವನ್ನು ಮುಗಿಸಿ ರಮೇಶನ ಕಡೆಗೆ ಬಂದನು. ಆದರೆ ಅರಮನೆಯಲ್ಲಿ ರಮೇಶನೂ ಇಲ್ಲದ್ದರಿಂದ ನಿರಾಶನಾಗಿ ಅಜಿತನ ಕಡೆಗೆ ಬಂದನು. ಅಲ್ಲಿ ಇಬ್ಬರೂ ಕುಳಿತಿದ್ದರಿಂದ, ಅವನು ಇಬ್ಬರನ್ನು ಅಪ್ಪಿಕೊಂಡು ಹುಚ್ಚನಂತೆ ಕುಣಿದಾಡತೊಡಗಿದನು. ಅವನ ಈ ಕೃತಿಯಿಂದ ಇಬ್ಬರೂ ಗಾಬರಿಯಾಗಿ " ರಾಜಶೇಖರಾ " ಎಂದು ಕರೆಯಹತ್ತಿದರು. ಆಗ ರಾಜಶೇಖರನು ಸಮಾಧಾನದಿಂದ ಕುಳಿತು, ತನ್ನ ಪತ್ನಿ ಹೇಳಿದ್ದೆಲ್ಲವನ್ನು ಸವಿಸ್ತಾರವಾಗಿ ವರ್ಣಿಸಿ ಹೇಳಿದನು. ಇದರಿಂದ ರಮೇಶನಿಗೂ ಆನಂದವಾಗಿ ಮನದಲ್ಲಿಯೇ ದೇವರನ್ನು ಪ್ರಾರ್ಥಿಸಿ, ಈಗ ಬರುವೆನೆಂದು ರಾಜಶೇಖರನಿಗೆ ಹೇಳಿ ಚಂಪಾದೇವಿಯ ಕಡೆಗೆ ಬಂದನು.

ರಾಜಕುಮಾರ ರಮೇಶನು ತನ್ನ ಮನೆಗೆ ಬಂದದ್ದನ್ನು ನೋಡಿ ಚಂಪಾದೇವಿಗೂ ಆನಂದವಾಯಿತು. ಆಕೆಯು ರಮೇಶನನ್ನು ಸ್ವಾಗ

ತಿಸತೊಡಗಿದಳು. ಆದರೆ ರಮೇಶನು “ ಭಾಬೀ, ನಿನ್ನಿಂದ ಸ್ವಾಗತಿ ಸಿಕೊಳ್ಳಲು ನಾನಿಲ್ಲಿ ಬಂದಿಲ್ಲ. ಈಗ ಮಹತ್ವದ ಕೆಲಸವನ್ನು ನೀನೇ ಮಾಡಿದ್ದರಿಂದ, ನಿನ್ನನ್ನು ಎಷ್ಟು ವರ್ಣಿಸಿದರೂ ತೀರದು. ” ಎಂದು ಪಾದಗಳನ್ನು ಹಿಡಿದನು. ಆಗ ಚಂಪಾದೇವಿಯು ಅವನನ್ನು ಎಬ್ಬಿಸಿ “ ರಮೇಶಾ, ಆ ನಿಮ್ಮೆಲ್ಲರ ಸುಖ-ದುಃಖಗಳು ನನ್ನನ್ನು ಕೂಡಿದೆವೆಂದ ಮೇಲೆ, ಆಕೆಯ ಸಲುವಾಗಿ ಇಷ್ಟು ಕಷ್ಟ ಪಟ್ಟಿದ್ದರ ಆಶ್ಚರ್ಯವೇನು ? ಆಗ ರಾಜಕುಮಾರನು ಆನಂದದಿಂದ ತನ್ನ ಕೊರಳಲ್ಲಿಯ ಹಾರೊಂದನ್ನು ತೆಗೆದು “ ಭಾಬೀ, ನೀನು ಮಾಡಿದ ಸಾಹಸದ ಕೆಲಸಕ್ಕೆ ರಾಜಕುಮಾರನು ಅರ್ಪಿಸುವ ಇದೊಂದು ಅಲ್ಪ ಕಾಣಿಕೆ ” ಎಂದು ಅವಳ ಕೊರಳಲ್ಲಿ ಹಾಕಿ ಹೊರಡಲನು ವಾದನು. ಆದರೆ ಚಂಪಾದೇವಿಯು ಅವನನ್ನು ಬಿಡದೆ, ಆತನು ಒಲ್ಲೆನೆಂದರೂ ಅಡಿಗೆಯ ಮನೆಯಲ್ಲಿ ಕರಕೊಂಡು ಹೋಗಿ ಊಟಕ್ಕೆ ಕೂಡ್ರಿಸಿಯೇ ಬಿಟ್ಟಳು.

## ೧೩

ಸೇನಾಪತಿ ಅಕಬರಖಾನನು, ಮಹಾರಾಣಾ ಶಾರ್ದೂಲ-ಸಿಂಹನ ಒಪ್ಪಿಗೆ ಪಡೆದ ನಂತರ ತನ್ನಲ್ಲಿಯ ಮೂವರು ಸರದಾರರನ್ನು ಮೇಣೆ ತರಲಿಕ್ಕೆಂದು ದಿಲ್ಲಿಗೆ ಕಳುಹಿಸಿದ್ದನು. ಅವರಂಗಜೇಬ ಬಾದಶಹನು ಇದರಿಂದ ಸಂತೋಷವಾಗಿ ಒಂದು ಉತ್ತಮವಾದ ಮೇಣೆಯನ್ನು ಕಳುಹಿಸಿದನಲ್ಲದೆ, ರಕ್ಷಣೆಗಾಗಿ ಹೆಚ್ಚಿಗೆ ಕೆಲವು ಜನರನ್ನು ಕಳುಹಿಸಿ ಕೊಟ್ಟನು. ಇದನ್ನೆಲ್ಲ ತಿಳಿದ ಆ ಮೂವರು ತರುಣರು ಇನ್ನು ಹೆಚ್ಚು ಕಾಲ ಕೂಡ್ರುವದು ಸರಿಯಿಲ್ಲೆಂದು ತಿಳಿದು ಸಹಾಯವನ್ನು ಕೇಳುವದಕ್ಕಾಗಿ ಅಜಿತನು ಮಹಾರಾಣಾ ಜೋರಾವರಸಿಂಹನ ಕಡೆಗೂ, ರಮೇಶ, ರಾಜಶೇಖರನು ಛತ್ರಪತಿ ಶಿವಾಜಿ ಮಹಾರಾಜನ ಕಡೆಗೂ ಹೊರಟರು. ದೂರದಿಂದಲೇ ಇವರ ಬರುವಿಕೆಯ ಸುದ್ದಿಯನ್ನು ತನ್ನ ದೂತರಿಂದ ತಿಳಕೊಂಡ ಶಿವಾಜಿಯು

ಅವರ ಸ್ವಾಗತದ ಸಿದ್ಧತೆಯನ್ನು ಪಡೆಸಿದನು. ಅಷ್ಟರಲ್ಲಿ ಕುದುರೆಗಳ ಸಪ್ಪಳವು ಬರಹತ್ತಿ ಕೆಂಧೂಳಿಯು ಹಾರಹತ್ತಿದ್ದರಿಂದ ಅವರ ಬರುವಿಕೆಯನ್ನು ಒಳ್ಳೇ ಉತ್ಕಂಠತೆಯಿಂದ ಹಾರೈಸಿದನು. ಅವರ ಬರುವ ಕಾರ್ಯದಿಂದ ಕೊಂಡಾಣೆಯ ದುರ್ಗಕ್ಕಾಗಿ, ಮಾತೆಯರ ಮಾನದ ಉದ್ಧಾರಕ್ಕಾಗಿ, ತನ್ನ ಮಗನ ಮದುವೆಯನ್ನು ವರ್ಜ್ಯ ಮಾಡಿ, ತನ್ನನ್ನೇ ಬಲಿದಾನ ಮಾಡಿದ ತಾನಾಜಿಯ ನೆನಪಿನಿಂದ ಅವನ ಕಣ್ಣಲ್ಲಿ ನೀರೂರಿದವು. “ ಇಂತಹ ಸಿಂಹಗಳು ನಮ್ಮ ದೇಶ ದಲ್ಲಿರುವತನಕ ಭಾರತ ಮಾತೆಯ ತೇಜವು ಎಂದಿಗೂ ಬಲಹೀನವಾ ಗಲಾರದು..” ಎಂಬ ಉದ್ಗಾರವು ಅವನಿಂದ ಹೊರಡಿತು. ಈಗ ಸದ್ಯಕ್ಕೆ ಅಂತಹದೇ ಪ್ರಸಂಗವು ಬಂದಿರಲು ಅದಕ್ಕಾಗಿ ತನ್ನ ದೇಹವೂ ಅರ್ಪಿಸಬೇಕೆಂದು ನಿಶ್ಚಯಿಸಿದನು.

ಅಷ್ಟರಲ್ಲಿಯೇ ಆ ಇಬ್ಬರೂ ವೀರರು ಅಲ್ಲಿ ಬಂದು ತಲುಪಿದರು. ಶಿವಾಜಿಯು ಅವರನ್ನು ಆನಂದದಿಂದ ಅಪ್ಪಿಕೊಂಡು ಕರಕೊಂಡು ಬಂದನು. ಈ ಸುದ್ದಿಯು ಜೀಜಾಮಾತೆಗೂ ತಿಳಿದಕೂಡಲೇ, ಆಕೆಯೂ ಬಂದಳು. ಆಗ ಅವರಿಬ್ಬರೂ ಆಕೆಯ ಪಾದಕ್ಕೆರಗಿದರು. ಆಗ ಅವಳು “ ವಿಜಯೀಭವ ” ಎಂದು ಅವರನ್ನೆಬ್ಬಿಸಿ “ ಇಂತಹ ಪ್ರಸಂಗವನ್ನು ನನ್ನ ಮಗನಿಗೆ ತಂದು ಕೊಟ್ಟಿದ್ದಕ್ಕಾಗಿ, ಭವಾನೀ ಮಾತೆಗೆ ಅಭಿ ನಂದಿಸುತ್ತೇನೆ ” ಎಂದಳು. ತಾವು ಬರುವದಕ್ಕಿಂತ ಮೊದಲೇ ಈ ಸುದ್ದಿಯು ಇಲ್ಲಿ ಹೇಗೆ ಗೊತ್ತಾಯಿತು. ಎಂದು ಅವರೂ ಆಶ್ಚರ್ಯ ಪಟ್ಟರು. ಅಗ ರಮೇಶನು ” ಮಾತೇ ಸ್ವಜನ ಬಂಧುಗಳ ಸಂಕಟದ ಪರಿಹಾರಕ್ಕಾಗಿ ತನ್ನ ಪ್ರಾಣವನ್ನೇ ಅರ್ಪಿಸಲು ಸಿದ್ಧವಿರುವ ಈ ವೀರನ, ಇಂತಹ ಪರಿಸ್ಥಿತಿಗೆ ಎದೆಗುಂದಿ ನಿರಾಕರಿಸುವನೇ ? ” ಆಗ ಶಿವಾಜಿಯು “ ಈ ತರದ ಕಾರ್ಯಕ್ಕಾಗಿ ಬರುವ ನಿನ್ನ ಬಾಂಧ ವರಿಗೆ, ನನ್ನ ನೇತ್ರಗಳನ್ನು ಶಿರವನ್ನು ನಿಮ್ಮ ಸ್ವಾಗತಕ್ಕಾಗಿ ಹಾಸು

ಬಟ್ಟೆಯಾಗಿ ಹಾಸುತ್ತೇನೆ. ನನ್ನ ಸೈನ್ಯದೊಂದಿಗೆ ನಿಮ್ಮ ಕುದುರೆಗಳನ್ನು ಹಿಂಬಾಲಿಸಿ ದೇಶಾದ್ಯಂತವನ್ನು ಗೆದ್ದು ಕೊಡುತ್ತೇನೆ." ಇವನ ಮಾತುಗಳಿಂದ ಇಬ್ಬರಲ್ಲಿಯೂ ಆನಂದಾಶ್ರುಗಳು ಉದುರಿದವು. ಆಗ ರಮೇಶನು "ಬಂಧು, ನಾನೀಗ ಬಂದಿರುವದು ರಾಜ್ಯದಾಸೆಗಾಗಿ ಅಲ್ಲ. ಅವತಾರೀ ಪುರುಷನಾದ ನೀನೇ, ಈ ಭೂಮಂಡಲವನ್ನು ಆಳು. ಆದರೆ ನನ್ನ ತಂಗಿಯನ್ನು, ಆಕೆಯ ಸಂಕಟದಿಂದ ಮುಕ್ತ ಮಾಡಲು ಬಂದ ಮಹಾನುಭಾವ ವಿಜಯ ಕುಮಾರನನ್ನು ಬಿಡುಗಡೆ ಮಾಡಿಸು," ಈ ಮಾತಿನಿಂದ ಶಿವಾಜಿಯು ಕೋಮಲ ಮನಕ್ಕೆ ಪೆಟ್ಟು ಹತ್ತಿ, ಕಣ್ಣಲ್ಲಿ ನೀರು ತಂದು "ರಮೇಶಾ, ಭಾರತ ಮಾತೆಯ ಉದರದಿಂದ ಜನಿಸಿದ ಆಕೆಯು ನನಗೂ ತಂಗಿಯಂತೆ ಇದ್ದಾಳೆ. ಆದ್ದರಿಂದ ಚಿಂತಿಸಬೇಡ" ಎಂದು ಸಮಾಧಾನ ಹೇಳಿದನು. ಆಗ ಜೀಜಾಮಾತೆಯು "ಮಗೂ, ದಣಿದು ಬಂದಿರುವ ಅತಿಥಿಗಳಿಗೆ ಊಟಕ್ಕಾದರೂ ಎಬ್ಬಿಸು." ಎಂದು ಅವರನ್ನು ಕರದೊಯ್ದು ಊಟಕ್ಕೆ ಕೂಡ್ರಿಸಿದಳು. ಆದರೆ ಶಿವಾಜಿಯು ಮಾತ್ರ ಹೆಸರಿಗೆ ಊಟಕ್ಕೆ ಕುಳಿತಿದ್ದನು. ಅವನ ಚಿತ್ತವೆಲ್ಲ ಮೇವಾಡದ ಕಡೆಗೇ ಇತ್ತು. ಆಗ ಅವನಿಗೆ ರಜಪೂತರ ಗತ ವೈಭವದ ಇತಿಹಾಸವು ನೆನಪಿಗೆ ಬರಹತ್ತಿತು. "ಅಲ್ಲಾವುದ್ದೀನನಿಗೆ ತನ್ನ ಕೂದಲೆಳೆಯನ್ನು ಕೂಡ ತೋರಿಸಿದ ವೀರ ರಮಣಿ ಪದ್ಮಿನಿ! ಚಿತ್ತೋರ, ಚಿತ್ತೋರವೆಂದು ಪ್ರಾಣನೀಡಿದ ಪ್ರತಾಪಶಾಲಿ ಮಹಾರಾಣಾ ಪ್ರತಾಪ" ಇವರೆಲ್ಲರ ಸ್ಮರಣೆಯಿಂದ ಅವನಲ್ಲಿ ರೋಮಾಂಚವು ಎದ್ದು, ತನಗೆ ತಾನೇ ತಿಳಿಯದ ಹಾಗೆ "ಧನ್ಯ ಪ್ರತಾಪ, ಹಸಿದ ಮಕ್ಕಳ ರೋದನಕ್ಕೂ ಕೂಡ ಅಲಕ್ಷಿಸಿ, ಅಕಬರನ ಸಮ್ರಾಟತ್ವಕ್ಕೆ ತಲೆ ಬಾಗಿಸದ ವೀರನೇ, ನೀನೇ ಧನ್ಯ" ಎಂಬ ಉದ್ಗಾರವು ಹೊರಟಿತು. ಈ ಮಾತುಗಳನ್ನು ಕೇಳಿ ಎಲ್ಲರೂ ವಿಸ್ಮಯಗೊಂಡು ಅವನೆಡೆಗೆ ನೋಡಿದರು. ನೀಡಿದ ಊಟವು ಹಾಗೆಯೇ ಇತ್ತು, ಆಗ ಜೀಜಾಮಾತೆಯು

‘‘ ಮಗೂ, ಇದೇನು ನಡೆಸಿರುವೆ ” ಎನ್ನಲು, ಶಿವಾಜಿಯು ಎಚ್ಚತ್ತ ವನಂತೆ ‘‘ಮಾತೋಶ್ರೀ ಈ ತರದ ಪಂಚಪಕ್ವಾನ್ನಗಳು, ಎಲ್ಲಿಯ ವರೆಗೆ ಒಬ್ಬ ಭಾರತ ವಾಸಿಯು ದುಃಖದಿಂದ ಕೊರಗುತ್ತಿರುವನೋ, ಅಲ್ಲಿಯು ತನಕ ನನಗೆ ವಿಷ ಸಮಾನವಿದೆ. ” ಎಂದು ಹಾಗೆಯೇ ಎದ್ದನು. ಇದರಿಂದ ರಮೇಶನಿಗೂ ಸ್ವಲ್ಪ ದುಃಖವಾಗಿ ಹಿಂದೂ ಜನರ ಸಲುವಾಗಿ ಇಷ್ಟು ಕಳವಳ ವಿದ್ದದ್ದನ್ನು ನೋಡಿ, ಅವನೂ ಎದ್ದನು.

ಆ ದಿನ ರಮೇಶ, ರಾಜಶೇಖರರು ನಿಲ್ಲಲು ಒಪ್ಪದಿದ್ದರೂ, ಜೀಜಾಮಾತೆಯು ಒತ್ತಾಯದಿಂದ ನಿಲ್ಲಿಸಿಕೊಂಡಳು. ಶಿವಾಜಿ ಮಹಾ ರಾಜರು ಆ ದಿನ ರಾತ್ರಿ ತಮ್ಮ ಎಲ್ಲ ಸೈನಿಕ ಬಾಂಧವರನ್ನು ಕರೆಯಿಸಿ, ಬಂದ ಅತಿಥಿಗಳ ಪರಿಚಯುವನ್ನು ಮಾಡಿಕೊಟ್ಟರು. ನಂತರ ರಮೇ ಶನು ಅವರನ್ನು ಕುರಿತು ‘‘ ಬಂಧುಗಳೇ, ನಿಮ್ಮ ಹಿಂದಿನ ಸೇನಾ-ನಾಯ ಕನಾದ ಗಂಡುಗಲಿ ತಾನಾಜಿಯು, ಉದಯಭಾನುವಿನ ಕೈಯಲ್ಲಿ ಸಿಕ್ಕ ರಜಪೂತ ಕನ್ನಿಕೆಯ ಮುಕ್ತಿಗಾಗಿ, ತನ್ನ ದೇಹತ್ಯಾಗ ಮಾಡಿ, ಆ ಮಾನಿನಿಯ ಮಾನವನ್ನುಳಿಸಿದನೋ, ಅದೇ ತರದ ಅದೇ ಸನ್ನಿವೇಶವು, ಈಗ ಸದ್ಯಕ್ಕೆ ಒದಗಿರುವದು. ಆದ್ದರಿಂದ ಆ ತಾನಾಜಿಯ ನೆನಪಿಗಾಗಿ, ಆ ಸಿಂಹದ ಸ್ಮರಣೆ ಮಾಡಿ, ಇನ್ನೊಮ್ಮೆ ನಿಮ್ಮ ಭಗಿನಿಯ ಮಾನವ ನ್ನುದ್ಧರಿಸಲು ಎದ್ದೇಳಿ ” ಎಂದು ಆಗಿ ಹೋದ ಘಟನೆಯನ್ನೆಲ್ಲವನ್ನು ತಿಳಿಸಿದನು. ಇದನ್ನು ಕೇಳಿ ಎಲ್ಲ ಸೈನಿಕರೂ ಸ್ಫೂರ್ತಿಗೊಂಡು ‘ ಜಯ ಭವಾನಿ ’ ಎಂದು ಘೋಷಣೆಯನ್ನು ಮಾಡಿದರು. ಆ ಘೋಷಣೆ ಯಿಂದ ಗಗನ ಮಂಡಲವೇ ಭೇಧಿಸಿತು.

ಇತ್ತ, ಅಜಿತನೂ ಮಹಾರಾಣಾ ಜೋರಾವರಸಿಂಹನ ಬಳಿಗೆ ಬಂದು, ನಡೆದ ವಿಷಯುವನ್ನು ತಿಳಿಸಿದನು. ಈ ಸುದ್ದಿಯನ್ನು ಕೇಳಿ ಜೋರಾವರಸಿಂಹನಿಗೂ ಅತೀವ ದುಃಖವಾಯಿತು. ‘‘ ತನ್ನ ಹೊಟ್ಟೆಯ

ಮಗಳನ್ನೆ ಯವನರಿಗೆ ಮಾರುವನೆಂದ ಬಳಿಕ, ಉಳಿದ ಸ್ತ್ರೀಯರ ಮಾನವನ್ನು ಹೇಗೆ ಕಾಪಾಡಬಲ್ಲನು !" ಆಗ ಅಜಿತನು ಈ ಕಾರ್ಯದ ಸಹಾಯಕ್ಕಾಗಿ ರಮೇಶನು ಛತ್ರಪತಿ ಶಿವಾಜಿಯ ಬಳಿಗೆ ಹೋಗಿರುವದನ್ನು ತಿಳಿಸಿದನು. ಇದರಿಂದ ಮಹಾರಾಣನಿಗೆ ಅತಿ ಆನಂದವಾಗಿ, ಯಾವನು ಹಿಂದೂ ಪ್ರತಿಪಾಲಕನೆಂಬ ಹೆಸರನ್ನು ಕೇಳಿದ್ದನೋ, ಆತನೇ ಶಿವಾಜಿಯ ಭೆಟ್ಟಿಯ ಸುಯೋಗವು ಸಿಗುವ ದೆಂದು ತಿಳಿದು ಮರು-ದಿನವೇ ಹೊರಡುವ ಸಿದ್ಧತೆಯನ್ನು ನಡೆಸಿದನು.

ಈ ಪ್ರಕಾರ ಮಹಾರಾಣಾ ಜೋರಾವರಸಿಂಹನೂ, ಪುಣೆ ಯಿಂದ ಶಿವಾಜಿ ಮಹಾರಾಜರೂ ಹೊರಟು ಒಂದೇ ದಿನ ಮೇವಾಡಕ್ಕೆ ತಲ್ಪಿದರು. ರಮೇಶನು ಇವರ ಸ್ವಾಗತದ ಸಿದ್ಧತೆಯನ್ನು ಮೊದಲೇ ಮಾಡಿಟ್ಟಿದ್ದರಿಂದ, ಅವರು ಬಂದ ಮೇಲೆ ವಿಶೇಷವೇನೂ ತ್ರಾಸವಾ ಗಲಿಲ್ಲ. ಮಹಾರಾಣಾ ಜೋರಾವರನೂ, ಶಿವಾಜಿ ಮಹಾರಾಜರೂ ಒಬ್ಬರನೊಬ್ಬರ ಪರಿಚಯ ಮಾಡಿಕೊಂಡು ಪ್ರೇಮಾಲಿಂಗನವನ್ನಿತ್ತರು. ಇದರಿಂದ ಅಲ್ಲಿ ವೀರರ ಸಂಗಮವಾಗಿ, ಹಿಂದುತ್ವ ರಕ್ಷಣೆಯ ಕಾರ್ಯವು ಕೈಗೂಡಹತ್ತಿತು. ರಾಜಕುಮಾರ ರಮೇಶ, ರಾಜಶೇಖರ ಅಜಿತ ಈ ಮೂವರಿಗೂ ಉತ್ಸಾಹ ತುಂಬಿ, ರಾಜಕುಮಾರಿಯ ಬಿಡುಗ ಡೆಯ ವಿಷಯಕ್ಕೆ ತಕ್ಕ ಮಟ್ಟಿಗೆ ನಿಶ್ಚಿಂತರಾದರು.

ಇತ್ತ ಸೇನಾಪತಿ ಅಕಬರಖಾನನು ಸೆರೆಯಾಳಾಗಿರುವ ವಿಜಯ ಕುಮಾರನನ್ನು ಭೆಟ್ಟಿಯಾಗಲು ದಿನಾಲು ಹೋಗುತ್ತಿದ್ದನೆಂದು ಹಿಂದೆ ಹೇಳಿದ್ದೇನೆ. ಅದರಂತೆ ಇಂದಾದರೂ ಅವನ ಬಳಿಗೆ ಬಂದು, "ಕುಮಾ ರರೇ, ಕ್ಷೇಮವೇ ?" ಎಂದನು. ಈ ಮಾತಿನಿಂದ ವಿಜಯಕುಮಾರನಿಗೆ ಸ್ವಲ್ಪ ಆಶ್ಚರ್ಯವನ್ನುಂಟು ಮಾಡಿತು. ಈಹೊತ್ತು ಏನಾದರೂ ವಿಶೇಷವಿರಬಹುದೆಂದು ತರ್ಕಿಸಿದನು. ವಿಜಯನು ವಿಚಾರ ಮಾಡುತ್ತ ಸುಮ್ಮನೇ ನಿಂತದ್ದನ್ನು ನೋಡಿ ಖಾನನು "ಈ ದಿನ ನಿಮ್ಮನ್ನು

ಮಹಾರಾಣಾ ಶಾರ್ದೂಲಸಿಂಹರ ಎದುರಿಗೆ, ಮುಸಲ್ಮಾನೀ ದೀಕ್ಷೆಯನ್ನು ಕೊಟ್ಟು, ರಾಜಕುಮಾರಿ ಲೀಲಾವತಿಯು ಕೂಡ ತನ್ನ ಮದುವೆಯನ್ನು ಮಾಡತಕ್ಕದ್ದಿದೆ " ಎಂದನು. ಈ ಮಾತಿನಿಂದ ವಿಜಯಕುಮಾರನಿಗೆ ನಗೆ ಬಂದಿತು. ಆದರೂ ಶಾಂತ-ಚಿತ್ತದಿಂದ "ಖಾನಸಾಹೇಬರೆ ರಜಪೂತರು, ಅರ್ಥಾತ ಹಿಂದೂಗಳು ಕೇವಲ ರಾಜ್ಯದಾಶೆಗಾಗಿ ಅಥವಾ ಹೆಣ್ಣಿನಾಸೆಗಾಗಿ ಪ್ರಾಣಕ್ಕಿಂತಲೂ ಹೆಚ್ಚಿನದಾದ ಧರ್ಮವನ್ನು ಬಿಡರು. ನನ್ನ ಧರ್ಮದ ಉದ್ಧಾರಕ್ಕಾಗಿ, ಈ ಸೆರೆಮನೆಯಲ್ಲಿರುವ ಸುಖವು, ಸ್ವರ್ಗ-ಸುಖಕ್ಕಿಂತಲೂ ಮಿಗಿಲಾಗಿದೆ. ಅಂದಮೇಲೆ ಇದಕ್ಕಿಂತಲೂ ಹೆಚ್ಚಿಗೆ ನಾನೇನು ಹೇಳಲಿ ? " ಎನ್ನಲು, ಆಕಬರಖಾನನು ಸ್ವಲ್ಪ ಸಿಟ್ಟಿಗೆದ್ದವನಂತೆ ನಟಿಸಿ ಖಡ್ಗವನ್ನು ಅವನ ಎದೆಗೆ ಹಿಡಿದು " ಈ ಹೊತ್ತು ನೀನು ಧರ್ಮಾಂತರಕ್ಕೆ ಒಪ್ಪದಿದ್ದರೆ, ಈ ಖಡ್ಗವು ನಿನ್ನ ಹೃದಯವನ್ನು ಛೇಧಿಸಿ ಹೊರಗೆ ಬರುವದು. " ಈ ಮಾತಿನಿಂದಂತೂ ವಿಜಯಕುಮಾರನಿಗೆ ಹಿಡಿಸಲಾರದಷ್ಟು ನಗೆ ಬಂದು, ಆದರ ಭರದಲ್ಲಿಯೇ " ಖಾನಸಾಹೇಬಾ, ಧರ್ಮ, ಹಾಗೂ ಮಾತೃ-ಪ್ರೇಮದಿಂದ ತುಂಬಿದ ಈ ಹೃದಯವು, ನಿನ್ನಯ ಜಂಗು ಹಿಡಿದ ಖಡ್ಗದಿಂದ ಛೇಧಿಸುವದು ಅಸಾಧ್ಯವಿದೆ. ' ಸ್ವಧರ್ಮೇ ನಿಧನಂ ಶ್ರೇಯಃ | ಪರಧರ್ಮೋ ಭಯಾವಹಃ ॥ ' ಎಂಬ ಭಗವಾನ ಶ್ರೀಕೃಷ್ಣನ ಉದ್ಗಾರವು ರೋಮ-ರೋಮಗಳಲ್ಲಿ ತುಂಬಿ ಹೋಗಿದೆ. ಅದನ್ನು ನೀನು ಹೊರಚಲ್ಲಲಾರೆ. ಒಂದು ವೇಳೆ ಈ ಖಡ್ಗಕ್ಕೆ ನಾನೊಬ್ಬ ಆಹುತಿಯಾದರೂ, ನನ್ನ ಹಿಂದೆ ಇರುವ ಭಾರತ ಮಾತೆಯ ವೀರಪುತ್ರರು ನಿಮ್ಮ ದೈತ್ಯರ ರಕ್ತವನ್ನು ಹೀರುವರು. ಆದ್ದರಿಂದ ಮುಂದಿನ ನಿಮ್ಮ ಗತಿಯನ್ನು ನೋಡಿಕೊಳ್ಳಿರಿ " ಎಂದು ಗದ್ದರಿಸಿದನು. ಆಗ ಆಕಬರಖಾನನು ಅಂಜಿ, ಮನಸ್ಸಿನಲ್ಲಿ ಇವನನ್ನು ದಿಲ್ಲಿಗೆ ಒಯ್ದು ಬಾದಷಹರ ಮುಂದೆ ನಿಲ್ಲಿಸಬೇಕೆಂಬ ವಿಚಾರಮಾಡಿ, ಕುಮಾರನಿಗೆ " ಕುಮಾರರೇ; ಇನ್ನೊಮ್ಮೆ ನಿಮ್ಮ ಅಂತಿಮ ಭೆಟ್ಟಿಗೆ

ಬರುತ್ತೇನೆ. ಎಚ್ಚರ ವಿರಲಿ ” ಎಂದು ಹೇಳಿ, ಅವನ ಮೇಲೆ ಮತ್ತಿಷ್ಟು ಕಠೋರವಾದ ಪಹರೆಯನ್ನಿಟ್ಟು ರಾಜ-ಗೃಹಕ್ಕೆ ಬಂದನು.

ಅದೇ ದಿನ ರಾತ್ರಿ ಮಹಾರಾಣಾ ಜೋರಾವರಸಿಂಹನೂ, ಛತ್ರ ಪತಿ ಶಿವಾಜಿ ಮಹಾರಾಜರೂ ತಮ್ಮ ಭಾವಣೆಯಲ್ಲಿ ಮಾತಾಡುತ್ತ ಕುಳಿತಿದ್ದರು. ಆಗ ರಾಜಶೇಖರನೂ ಅಜಿತನೂ ಬಂದು ಅವರ ಪಕ್ಕದಲ್ಲಿ ಕುಳಿತರು. ಮಹಾರಾಣಾನು ಸೆರೆಯಾಳಾದ ವಿಜಯಕು ಮಾರನ ಬಗ್ಗೆ ಚಿಂತಿಸುತ್ತಿದ್ದನು. ಆಗ ಶಿವಾಜಿ ಮಹಾರಾಜರು “ ಮಹಾರಾಣಾ, ಸಿಂಹಗಳು ಪಂಜರಲ್ಲಿದ್ದರೂ ಅದರ ಸಲಾಕೆಯನ್ನು ಮುರಿದು ಹೊರಗೆ ಬರುವವೇ ಹೊರತು, ನರಿಯಂತೆ ಜೀವದಾನ ಕೇಳುತ್ತಿರುವದಿಲ್ಲ ” ಎಂದು ಹೇಳಿ, ಸಮಾಧಾನ ಪಡಿಸಹತ್ತಿದರು.

ಇಂತಹ ವೀರೋಲ್ಲಾಸದ ಮಾತುಗಳು ಆ ಭಾವಣೆಯಲ್ಲಿ ನಡೆ ಯುತ್ತಿರಲು, ರಾಜ-ಕುಮಾರ ರಮೇಶನೊಬ್ಬನು ಮಾತ್ರ ಖಿನ್ನಮ ನಸ್ಕನಾಗಿ ಅಲ್ಲಿ ಪ್ರವೇಶ ಮಾಡಿದನು. ಇದರಿಂದ ಉಳಿದವರಿಗೂ ಸ್ವಲ್ಪ ಚಿಂತೆಯೊಳಗಾಗಿ, ಅಜಿತನು ಕಾರಣವನ್ನು ಹೇಳಲು ಒತ್ತಾಯ ಪಡಿಸಿದನು. ಆಗ ರಾಜ-ಕುಮಾರನು ಹೇಳಲೋ, ಬೇಡವೋ ಎನ್ನುವಂತೆ “ ನಮ್ಮ ಎಲ್ಲ ಸೈನಿಕರು ನನ್ನ ತಂದೆಯ ವಶರಾಗಿ, ಆ ಅಕಬರಖಾನನ ವಿರುದ್ಧ ಶಸ್ತ್ರವೆತ್ತಲು ಹಿಂಜರಿಯುತ್ತಿದ್ದಾರೆ” ಎಂದು ಅಂಜುತ್ತ ಹೇಳಿದನು. ಆಗ ಶಿವಾಜಿ ಮಹಾರಾಜರು ಗಂಭೀರ ಧ್ವನಿಯಿಂದ “ ರಾಜಕುಮಾರ, ಇಷ್ಟಕ್ಕಾಗಿ ಖಿನ್ನ ಮನಸ್ಕ ನಾಗಿರುವೆಯೋ? ಅಂಜಬೇಡ. ಈ ನಮ್ಮ ಕಾರ್ಯಕ್ಕಾಗಿ ಪತಿವ್ರತೆ ಯರ ಆಶೀರ್ವಾದವೂ, ಜಗಜ್ಜನನಿ ಗಿರಿಜಾದೇವಿಯ ಕೃಪೆಯೂ, ಹಾಗೂ ಲಕ್ಷ್ಮೀವಲ್ಲಭನ ಸಹಾಯವೂ ನಮಗಿದೆ. ಆದ್ದರಿಂದ ಈಗಿ ರುವಷ್ಟು ನಮ್ಮ ಸೈನ್ಯ ಬಲದಿಂದಲೇ ಹೋರಾಡೋಣ. ಈ

ಯುದ್ಧಕ್ಕೆ ಉಮಾಪತಿಯು ನಮಗೆ ಜಯವನ್ನು ಕೊಟ್ಟೇ ಕೊಡುವ ನೆಂಬ ಆತ್ಮವಿಶ್ವಾಸವೆನಿಸಿದೆ. ” ಎಂದು ಸಮಾಧಾನವನ್ನು ನಗಿ ಹೇಳಿದರು.

## ೧೪

ಕಡೆಗೊಂದು ದಿನ ಯುದ್ಧವು ನಿಶ್ಚಿತವಾಯಿತು. ಆ ದಿನ ಎಲ್ಲರೂ ಮುಂಜಾವದಲ್ಲೇ ಎದ್ದು, ತಮ್ಮ ತಮ್ಮ ಪ್ರಾತರ್ವಿಧಿಗಳನ್ನು ತೀರಿಸಿಕೊಂಡರು. ರಾಜಶೇಖರನು ತನ್ನ ಕೆಲಸವನ್ನೆಲ್ಲ ತೀರಿಸಿ ಕೊಂಡು ಛಾವಣಿಯ ಕಡೆಗೆ ಹೊರಡಲನುವಾದಾಗ, ಅವನ ಪತ್ನಿ ಚಂಪಾದೇವಿಯು ಆರತಿಯನ್ನು ಬೆಳಗಿ ಗಂಧವನ್ನು ಹಚ್ಚತೊಡ ಗಿದಳು. ಆದರೆ ರಾಜಶೇಖರನು ನಿರಾಕರಿಸಿ ವೀರ ಪತಿಯರಿ ಗೊಪ್ಪುವ ಹಾಗೆ ಹೆಬ್ಬೆರಳಿನ ರಕ್ತದ ತಿಲಕವನ್ನು ಹಚ್ಚಬೇಕೆಂದು ಹೇಳಿದನು. ಆಗ ಅವಳು ಸಂತೋಷದಿಂದ ನಗೆಮುಖವಾಗಿ, ಅವನ ನಡುವಿನಲ್ಲಿರುವ ಸಣ್ಣ ಬರ್ಚಿಯನ್ನು ಹಿರಿದು, ರಕ್ತ ಹೊರ ಬೀಳುವಂತೆ ಸಣ್ಣ ಗಾಯ ಮಾಡಿ, ಅವನ ಹಣೆಗೆ ದುಂಡಾಗಿ ಹಚ್ಚಿ ದಳು. ಇದರಿಂದ ಅವನ ಮುಖದ ತೇಜವು ಮತ್ತಿಷ್ಟು ಶೋಭಾಯ- ಮಾನವಾಗಿ ಕಾಣಹತ್ತಿತು. ಅಷ್ಟರಲ್ಲಿ ರಾಜಕುಮಾರ ರಮೇಶನೂ, ಅಜಿತನೂ ಬಂದು ಚಂಪಾದೇವಿಗೆ ಪ್ರಣಾಮಿಸಿದರು. ಚಂಪಾದೇ- ವಿಯು, ಅವರಿಗೂ ಮಂಗಲಾರತಿಯನ್ನು ಬೆಳಗಿ ‘ ವಿಜಯೀ–ಭವ’ ಎಂದು ಮಂಗಲಾಶಿರ್ವಾದವನ್ನೀಡಿ ಕಳುಹಿಸಿದಳು.

ಛಾವಣಿಯಲ್ಲಿ ಈ ತರದ ಸಮರ--ಸನ್ನಾಹವು ನಡೆದಿರಲು, ಇತ್ತ ರಾಜ-ಗೃಹದಲ್ಲಿ ಸೇನಾಪತಿ ಅಕಬರಖಾನನು ಮಹಾರಾಣಾ ಶಾರ್ದೂಲಸಿಂಹನೊಂದಿಗೆ ಕುಳಿತಿದ್ದನು. ಅಕಬರಖಾನನು ದಿಲ್ಲಿಯ ಬಾದಷಹನಾದ ಅವರಂಗಜೇಬನ ವೈಭವದ ವರ್ಣನೆಯನ್ನು ಮಾಡು ತ್ತಿರುವಾಗ, ಮಹಾರಾಣಾ ಶಾರ್ದೂಲಸಿಂಹನ ಮುಖವು ಅರಳಿ

ಹಿಗ್ಗುತ್ತಿತ್ತು. ಇಂತಹ ಧನಾಢ್ಯನಾದ ದಿಲ್ಲೀ ಬಾದಷಹನಿಗೆ ತನ್ನ ಮಗಳನ್ನರ್ಪಿಸಿ, ತಾನೂ ಧನ್ಯನಾಗುವೆನೆಂದು ಬಯಸಿದ್ದನು. ಆದರೆ ವಿಧಿಲಿಖಿತವು ಮಾತ್ರ ಬೇರೆಯಾಗಿತ್ತು. ಈ ತರದ ಅವರಿಬ್ಬರ ಸರಸ-ಸಲ್ಲಾಪಗಳು ನಡೆದಿರಲು, ಒಮ್ಮೆಲೇ "ಹರ ಹರ ಮಹಾ-ದೇವ" ಎಂಬ ಜಯ-ಘೋಷಣೆಯಿಂದ ರಾಜ-ಗೃಹವೇ ಭೇದಿಸಿತು. ಆಗ ಅವರಿಬ್ಬರು ಹೊರಗೆ ಬಂದು ನೋಡಲಾಗಿ, ಎಲ್ಲರ ಸಮ್ಮುಖದಲ್ಲಿ ರಾಜಕುಮಾರ ರಮೇಶನೂ, ಅವನ ಹಿಂದೆ ಮಹಾರಾಣಾ ಶಾರ್ದೂಲಸಿಂಹ ಹಾಗೂ ಛತ್ರಪತಿ ಶಿವಾಜಿ ಮಹಾರಾಜರು ಕೂಡಿಕೊಂಡು ಹೋಗುತ್ತಿರುವದು ಕಾಣಿಸಿತು. ಈ ದೃಶ್ಯದಿಂದ ಮಹಾರಾಣಾ ಶಾರ್ದೂಲಸಿಂಹನ ಹೃದಯವು ಧಸ್ಸೆಂದಿತು. ಇಷ್ಟು ಸಮಯಗಳವರೆಗೆ ಆನಂದದಿಂದ ಅರಳುತ್ತಿದ್ದ ಮುಖಕಮಲವು, ಈ ದೃಶ್ಯದಿಂದ ಬಾಡಿ ಒಣಗಹತ್ತಿತು. ಈ ತರದ ಸಪ್ಪೆಯಾದ ಮುಖವನ್ನು ಅಕಬರಖಾನನು ನೋಡಿ "ಮಹಾರಾಣಾ, ನೀಚ ಕಾಫರರ ಸೈನ್ಯವು ಬಂದಿದೆ. ಇನ್ನು ಕಾಲ ವಿಳಂಬ ಮಾಡಿ ಪ್ರಯೋಜನವಿಲ್ಲ. ಅವರಿಗೆ ತಕ್ಕ ಶಾಸನವನ್ನು ನೀಡೋಣ, ನಡೆಯಿರಿ." ಎಂದು ಸರಸರನೆ ಕೆಳಗಿಳಿದು ಬಂದನು. ಆದರೆ ಛತ್ರಪತಿ ಶಿವಾಜಿ ಮಹಾರಾಜರನ್ನು ಕಂಡು ಅವನ ಹೃದಯವೂ ನಡುಗುತ್ತಿತ್ತು. ನಂತರ ಮಹಾರಾಣಾ ಶಾರ್ದೂಲಸಿಂಹನೂ ತನ್ನ ಸರ್ವ-ಸೈನ್ಯವನ್ನು ಕೂಡಿಕೊಂಡು ಅವರನ್ನು ಹುರಿದುಂಬಿಸುತ್ತ ನಡೆದನು.

ಈ ಪ್ರಕಾರ ಸಮರಾಂಗಣದಲ್ಲಿ ಎರಡೂ ಸೈನ್ಯಗಳು ಯುದ್ಧ ಸನ್ನದ್ಧರಾಗಿ ನಿಂತಿರಲು, ರಾಜಕುಮಾರ ರಮೇಶನು ತನ್ನ ಕೂಡ ಕಾದಾಡಲು ಬಂದಿರುವ ಮಿತ್ರರು, ಹಿರಿಯರು, ಅದರಲ್ಲಿಯೂ ಸ್ವತಃ ತನ್ನ ತಂದೆಯನ್ನು ಕಂಡು ಅವನಿಗೆ ಕಡು ದುಃಖವಾಯಿತು. "ಯವನರಿಂದ ಬಂಧಿತಳಾಗುತ್ತಿರುವ ಭಾರತ-ಮಾತೆಯ ಮುಕ್ತಿಗಾಗಿ, ಆರ್ಯ ಧರ್ಮದ ಉನ್ನತಿಗಾಗಿ, ತನಗೆ ಜನ್ಮವನ್ನೇ ನೀಡಿದ

ತಂದೆಯ ವಿರುದ್ಧ ಶಸ್ತ್ರವೆತ್ತಬೇಕಾಯಿತಲ್ಲಾ!" ಎಂದು ಕಳವಳಿಸ ತೊಡಗಿದನು. ಆದರೆ ಇಂತಹದೇ ಒಂದು ಮನೋದೌರ್ಬಲ್ಯಕ್ಕಾಗಿ ಗಾಂಡೀವ ಧನುಸ್ಸನ್ನೇ, ವೀರಾಗ್ರೇಸರ ಅರ್ಜುನನು ಕುರುಕ್ಷೇತ್ರದ ಧರ್ಮ--ಸಂಗ್ರಾಮದಲ್ಲಿ, ಚೆಲ್ಲಿ ನಿಂತಾಗ ಭಗವಾನ ಶ್ರೀಕೃಷ್ಣರು ನುಡಿದ 'ಕ್ಲೈಬ್ಯಂ ಮಾಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ| ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ॥' ಎಂಬ ವೇದವಾಣಿಯು ಸರ್ವ ಧರ್ಮ—ಪ್ರೇಮಿಗಳಿಗೂ ಚೈತನ್ಯವನ್ನು ನೀಡಿತು.

ಆಗ ನಡೆದ ಯುದ್ಧವನ್ನು ನನ್ನಂಥ ಅಲ್ಪಜ್ಞಾನಿಯು, ಈ ಲೇಖನಿಯಿಂದ ವರ್ಣಿಸುವದು ಅಸಾಧ್ಯವೇ ಸರಿ! ಎರಡೂ ಬಣದ ವರಿಗೆ ತುಮುಲ ಯುದ್ಧವು ನಡೆದು, ಸೇನಾಪತಿ ಅಕಬರಖಾನ-ರಾಜ ಕುಮಾರ ರಮೇಶನಿಗೂ,ಮಹಾರಾಣಾ ಶಾರ್ದೂಲಸಿಂಹ ಹಾಗೂ ಛತ್ರಪತಿ ಶಿವಾಜಿ ಮಹಾರಾಜರ ನಡುವೆಯೂ ಈ ಪ್ರಕಾರ ನಡೆದಿತ್ತೆಂಬದನ್ನು ಮಾತ್ರ ಹೇಳಬಲ್ಲೆನು. ಆದರೆ ಶಿವಾಜಿ ಮಹಾರಾಜರು ಒರೆಯಲ್ಲಿರುವ ಕತ್ತಿಯನ್ನು ಹಿರಿಯದೆ ಇದ್ದುದನ್ನು, ಮಹಾರಾಣಾ, ಶಾರ್ದೂಲಸಿಂಹನು ಕಂಡು ಆಶ್ಚರ್ಯಚಕಿತನಾದನು. ಆತನು ಶಿವಾಜಿ ಮಹಾರಾಜರಿಗೆ ಎಲೋ ಜೀವಗಳ್ಳಾ, ಯುದ್ಧವನ್ನು ಮಾಡುವ ಅಂಜಿಕೆ ನಿನಗಿದ್ದರೆ ಸಮರಾಂಗಣದಲ್ಲಿ ಕಾಲನ್ನೇಕೆ ಇಟ್ಟೆ?" ಅದಕ್ಕೆ ಶಿವಾಜಿ ಮಹಾರಾಜರು ನಸುನಗುತ್ತ "ಮಹಾರಾಣಾ, ತಮ್ಮ ಊಹೆಯು ನಿಜವಿದೆ. ಸಮರಾಂಗಣದಲ್ಲಿಯಾದರೂ ಪರಮಾತ್ಮನು ನಮ್ಮೀರ್ವರ ಭೆಟ್ಟಿಯನ್ನೊದಗಿಸಿಕೊಟ್ಟಿದ್ದು ಆನಂದದ ಸಂಗತಿ. ಮಹಾರಾಣಾ, ನಿಮ್ಮೊಡನೆ ಯುದ್ಧ ಮಾಡಲು ನನ್ನ ಅಪೇಕ್ಷೆಯಿಲ್ಲ. ಆದರೆ ಈಗ ನಡೆಯುವ ಯುದ್ಧದ ಪರಿಣಾಮ, ನಮ್ಮ ಜನವೇ ನಾಶವಾಗಿ, ನಮ್ಮ ರಕ್ತವೇ ಹರಿದು, ನಾವೇ ನಿರ್ಬಲರಾಗುವೆವಲ್ಲ! ಎಂದು ನನ್ನ ಮನವು ಕಳವಳಗೊ

ಳ್ಳುತ್ತಲಿಷೆ. ಈ ಮಾತುಗಳು ನಿಜವೆಂದು ಶಾರ್ದೂಲಸಿಂಹ ನಿಗೆ ಕಂಡು ಬಂದರೂ, ಅವನ ಮೇಲೆ ಅಕಬರಖಾನನ ಪ್ರಭಾವ ವಿದ್ದದ್ದರಿಂದ ಕಟುವಾಗಿ ತೋರಹತ್ತಿದ್ದರಿಂದ ಶಿವಾಜಿ ಮಹಾರಾಜರಿಗೆ “ ಶಿವಾಜೀ, ಕೆಲವು ದುರ್ಗಗಳನ್ನು ಯವನರಿಂದ ಮೋಸತನದಿಂದ ಗೆದ್ದ ಮಾತ್ರಕ್ಕೆ, ನೀನು ನಿಜವಾದ ವೀರನಾಗಲಿಲ್ಲ. ಆದರೆ ಈಗ ನನ್ನ ಕೂಡ ಯುದ್ಧ ಮಾಡಿದ ಕೂಡಲೆ ರಜಪೂತ ವೀರರ ಪ್ರತಾಪವು ನಿನಗೆ ಗೊತ್ತಾಗುವದು ” ಎಂದು ಅವರನ್ನು ತುಚ್ಛೀಕರಿಸಹತ್ತಿದನು. ಆದರೆ ಶಿವಾಜಿ ಮಹಾರಾಜರು ಶಾಂತಸ್ವಭಾವವುಳ್ಳವರಿದ್ದರಿಂದ, ನಮ್ರರಾಗಿ ನಮ ಸ್ಕರಿಸಿ “ ಮಹಾರಾಣಾ, ಯವನ ಸಮ್ರಾಟ ಅಕಬರನ ಅಧಿಪತ್ಯಕ್ಕೆ, ಬೇಕಾದಂತಹ ಸಂಕಟಗಳು ಒದಗಿದರೂ ತೃಣಸಮಾನವೆನಿಸಿ, ನತ ಮಸ್ತಕನಾಗದ ಭಾರತ ಮಾತೆಯ ಸಮಶೇರ ಪುತ್ರರಾದ ಮಹಾ ರಾಣಾ ಪ್ರತಾಪಸಿಂಹರ ವಂಶಜರಾದ, ತಮ್ಮ ವೀರತನಕ್ಕೆ ನಾನು ಶ್ಲಾಘಿಸುತ್ತೇನೆ. ಆದರೆ ತಮ್ಮ ವೀರತ್ವವು, ನಮ್ಮ ಭಾರತಾಂಬೆಯ ಉನ್ನತಿಗಾಗಿ ಸಮಪಯೋಗವಾಗದೆ ಹೋಗುತ್ತಿರುವದನ್ನು ಕಂಡು ವಿಷಾದ ಪಡುತ್ತಿದ್ದೇನೆ ” ಎಂದು ಮಡಿಯುತ್ತಿರುವ ಆರ್ಯ ಜನರ ಕಡೆಗೆ ಬೊಟ್ಟು ಮಾಡಿ ತೋರಿಸಿ “ ಮಹಾರಾಣಾ, ನೋಡಿರಿ. ಭಾರತ ಮಾತೆಯ ನಿರ್ಗತಿಕರಾದ ಮಕ್ಕಳು, ಕೇವಲ ಸ್ವಾರ್ಥದಾ- ಸೆಗಾಗಿ, ತಮ್ಮ-ತಮ್ಮೊಳಗೆ ಬಡಿದಾಡುತ್ತಿದ್ದಾರೆಂದು, ಸೇನಾಪತಿ ಅಕಬರಖಾನನು ನಗುತ್ತಿದ್ದಾನೆ. ಇದರ ಪರಿಣಾಮವಾಗಿ, ಅವ ರಂಗಜೇಬ ಬಾದಷಹನ ಶಕ್ತಿಯು ಮತ್ತಿಷ್ಟು ಬೆಳೆದು, ನಮ್ಮ ಅನ್ನಕ್ಕೆ ನಮಗೆ ಗತಿ ಇಲ್ಲದಾಗಿದೆ ” ಎಂದರು.

ಈ ಪ್ರಕಾರ ಇವನ ಸಂವಾದವು ನಡೆದಿರಲು, ಇತ್ತ ಸೇನಾಪತಿ ಅಕಬರಖಾನನು, ರಾಜಕುಮಾರ ರಮೇಶನೊಂದಿಗೆ ಯುದ್ಧ “ ಮಾಡುತ್ತ, ಮಾಡುತ್ತ ಕೇವಲ ಪ್ರಾಣಕ್ಕಂಜಿ, ಆ ಗುಡ್ಡದ ಇಲಿ-

ಯನ್ನು ಕರಕೊಂಡು ಬಂದೆಯಾ ? ” ಎಂದು ಹೀಯಾಳಿಸಹತ್ತಿದನು. ಆಗ ರಾಜಕುಮಾರನು ಸಿಟ್ಟಿಗೆದ್ದು “ಎಲೋ ನೀಚ ಖಾನಾ, ಗುಡ್ಡದ ಇಲಿಯೆಂದು ಬಾಯಿ ಬಿಡುತ್ತಿರುವ ನಿನ್ನ ನಾಲಿಗೆಯನ್ನೇ ಕತ್ತರಿಸು ವೆನು. ಶಕ್ಯವಿದ್ದರೆ, ಈ ನನ್ನ ಹೊಡೆತವನ್ನು ತಡೆ ” ಎಂದು ಗದ್ದ ರಿಸಿ, ಜೋರಿನಿಂದ ಒಂದು ವಾರವನ್ನು ಹೊಡೆದನು. ಆ ಖಡ್ಗದ ಹೊಡೆತಕ್ಕೆ, ಹಾಗೂ ಅವನ ಶೌರ್ಯತನಕ್ಕೆ ಈಡಾಗದ ಅಕಬರ ಖಾನನು, ಏನಾದರೂ ಮೋಸ ಮಾಡಿ ವಧಿಸಬೇಕೆಂದು ನಿಶ್ಚಯಿಸಿ “ರಾಜಕುಮಾರರೇ ಅಲ್ಲಿ ನೋಡಿ ತಮ್ಮ ತಂದೆಯವರ ಹೊಡೆತಕ್ಕೆ ಶಿವಾಜಿಯು ಉರುಳಿ ಬಿದ್ದನು. ಶತ್ರುನಾಶವಾಯಿತು” ಎಂದು ನಗಲಾರಂಭಿಸಿದನು. ಇವನ ಮಾತಿನ ಮೇಲೆ ರಾಜಕುಮಾರನ ನಂಬಿಗೆಯಿರದಿದ್ದರೂ, ಏನಾಗಿರುವದೋ ನೋಡಬೇಕೆಂದು ತರ್ಕಿಸಿ, ಮುಖವನ್ನು ಹೊರಳಿಸಿದನು. ಆಗ ಸೇನಾಪತಿ ಅಕಬರಖಾನನು ಇದೇ ಸಮಯವೆಂದು ತಿಳಿದು, ಅವನ ರುಂಡವನ್ನು ಹಾರಿಸುವ ಪ್ರಯತ್ನ ಮಾಡಿದನು. ಆದರೆ ರಾಜಕುಮಾರನ ಸುದೈವದ ಮೂಲಕ ಆ ಹೊಡೆತವು ಅವನ ಕೈಗೆ ಬಿದ್ದಿತು. ಆಗ ಅಕಬರಖಾನನು ಓಡಿ ಹೋಗುತ್ತಿರುವದನ್ನು ನೋಡಿ, ರಮೇಶನು “ಎಲೋ ಖಾನ, ಈ ಕೈಯಿಂದ ಬೀಳುತ್ತಿರುವ, ನನ್ನ ಒಂದೊಂದು ರಕ್ತದ ಹನಿಯೂ, ನಾಳಿನ ದಿನ ನಿಮ್ಮ ಜೀವವನ್ನು ಹಿಂಡುವವು” ಎಂದು ಗರ್ಜಿಸಿ ದನು. ಇವನ ಮಾತುಗಳಿಂದ ಶಾರ್ದೂಲಸಿಂಹನು ಸಿಟ್ಟಿಗೆದ್ದು, ತನ್ನ ಮಗನ ಕಡೆಗೆ ಕೆಂಗಣ್ಣಿಗಳಿಂದ ನೋಡುತ್ತ, ಸಮರಾಂಗಣದಿಂದ ಕಾಲ್ದೆಗೆದನು. ಈ ಪ್ರಕಾರ ಪ್ರಥಮ ದಿನದ ಯುದ್ಧವು ಸಮಾಪ್ತಿ ಯಾಯಿತು.

ಸೇನಾಪತಿ ಅಕಬರಖಾನನು ಓಡಿ ಬಂದದ್ದರಿಂದ, ಅವನ ಮನ ಸ್ಸಿಗೆ ಬಹಳೇ ಕೆಡಕೆನಿಸಿತು. ಆದಷ್ಟು ಬೇಗನೆ ದಿಲ್ಲಿಗೆ ಹೋಗಬೇ ಕೆಂದರೆ, ನಡುವೆ ಇದೊಂದು ವಿಘ್ನ ಬಂದಿತೆಂದು ಹಳಹಳಿಸಹತ್ತಿ-

ಹೆನು. ಆದರೆ ನಾಳಿನ ದಿನ ಹೀಗೆ ಸೋತು ಓಡಿ ಬರುವದು ಸರಿಯು ಲ್ಲೆಂದು ತಿಳಿದು, ಮರುದಿವಸ ಎಲ್ಲ ಸೈನಿಕರಿಗೂ ಸ್ಫೂರ್ತಿದಾಯಕ ಭಾಷಣವನ್ನು ಕೊಟ್ಟನು. ಆಗ ಅವರೆಲ್ಲರಿಗೂ ಕ್ಷಣಿಕ ಸ್ಫೂರ್ತಿ ಬಂದು ಮನೆಯ ಆಶೆ ಬಿಡಬೇಕಾಯಿತಲ್ಲಾ ಎಂಬ ನಿರುತ್ಸಾಹದಿಂದ ಮತ್ತೆ ಸಮರಾಂಗಣದೆಡೆಗೆ ನಡೆದರು. ಈ ಸಲ ಅಕಬರಖಾನನು ತನ್ನ ಮುಸಲ್ಮಾನ ಬಂಧುಗಳನ್ನು ಕರೆತಂದದ್ದನ್ನು ರಾಜಕುಮಾರ ರಮೇಶನು ಕಂಡು, ಆನಂದದಿಂದ ಈ ಸಲ ಯಾವ ಹಿಂದೂಗಳ ಕೂಡ ಹೋರಾಡದೆ, ಕೇವಲ ಮುಸಲ್ಮಾನರನ್ನೇ ಹಿಡಿಯಬೇಕು ಎಂದು ಸೂಚನೆಯನ್ನು ಕೊಟ್ಟನು. ಈ ದಿನ ಸಮರಾಂಗಣದಲ್ಲಿ ಎಲ್ಲರೂ ಕಡು ವೈರಿಗಳೇ ಕೂಡಿದ್ದರಿಂದ ಮೊದಲನೆಯ ದಿನದ ಯುದ್ಧ ಕ್ಕಿಂತಲೂ, ಈ ದಿನ ಇನ್ಮಡಿಸಿತೆನ್ನಲು ಅಡ್ಡಿಯಿಲ್ಲ. ಈ ಸಲ ಶಿವಾಜಿ ಮಹಾರಾಜರು, ಅಕಬರಖಾನನ ಸಮಾಚಾರವನ್ನು ತಕ್ಕೊಳ್ಳಬೇ ಕೆಂಬ ಉತ್ಸಾಹದಿಂದ ಮುಂದೆ ನಡೆದರು. ಹೀಗೆ ಉತ್ಸಾಹದಿಂದ ಬರುತ್ತಿರುವ ಶಿವಾಜಿ ಮಹಾರಾಜರನ್ನು ಕಂಡು, ಅಕಬರಖಾನನ ಉಸುರೇ ಕಟ್ಟಿದಂತಾಯಿತು. ಆದರೆ ಅಜಿತನು "ಮಹಾರಾಜ, ಇದು ತಮ್ಮ ಕರ್ತವ್ಯವಲ್ಲ"ವೆಂದು ಅವರನ್ನು ಬದಗಿರಿಸಿ ತಾನು ನಡೆದನು. ಆದರೆ ಅವನಿಗೂ ರಾಜಕುಮಾರ ರಮೇಶನು ಅಡ್ಡ ಬಂದು "ಅಜಿತಾ, ಯಾವನು ನಿನ್ನಿನ ದಿನ ನನಗೆ ಮೋಸದಿಂದ ಖಡ್ಗ ಪ್ರಹಾರ ಕೊಟ್ಟು ಹೋದನೋ, ಅವನೇ ನನಗಿಂದು ಯೋಗ್ಯನು" ಎಂದು ಅವನನ್ನು ಅಟ್ಟಿದನು. ಈ ದೃಶ್ಯದಿಂದ ಸೇನಾ ಪತಿ ಅಕಬರಖಾನನ ಅರ್ಧ ಜೀವವೇ ಹಾರಿ ಹೋದಂತಾಯಿತು. ಅವನ ಎದೆಯೊಡೆದು ನೀರಾಯಿತು. ಚಿತ್ರದಲ್ಲಿಯ ಬೊಂಬೆಯಂತೆ ಕುದುರೆಯ ಮೇಲೆ ಸ್ಥಿರವಾಗಿ ಕುಳಿತುಕೊಂಡನು. ಅಂಗಾಂಗಳಿಂದ ಬೆವರು ಸುರಿಯಲಾರಂಭಿಸಿತು. ಇನ್ನು ಈ ಖಾನನು ಹಣ್ಣಿಗೆ ಬಂದನೆಂದು ತಿಳಿದು ರಾಜಕುಮಾರ ರಮೇಶನು "ಕಾಫರ, ಹೀಗೇಕೆ

ಅಂಜಿ ಬೆವರನ್ನು ಸುರಿಸುತ್ತಿರುವೆ? ತೆಗೆ, ಒರೆಯಲ್ಲಿರುವ ಖಡ್ಗವನ್ನು" ಎನ್ನಲು, ಆಗ ಖಾನನು ಸ್ವಲ್ಪ ಪ್ರಜ್ಞೆಯ ಮೇಲೆ ಬಂದು ಧೈರ್ಯ ದಿಂದ ಖಡ್ಗವನ್ನು ತೆಗೆದು ಹೋರಾಡಲಾರಂಭಿಸಿದನು.

ಆದರೆ ಮೊಟ್ಟಮೊದಲು ಶಾರ್ದೂಲಸಿಂಹನ ಸೈನ್ಯದ ಹೊಡೆ ತಕ್ಕೆ ರಮೇಶನ ಸೈನ್ಯದವರು ಹಿಂದೆ ಸರಿಯ ಹತ್ತಿದರು. ಆದರೆ ಅಕಬರಖಾನನ ಕೂಡ ಯುದ್ಧದಲ್ಲಿ ಮಗ್ನನಾದ ರಮೇಶನಿಗೆ ಇದರ ಪರಿವೆಯು ಇದ್ದಿದ್ದಿಲ್ಲ. ಆಗ ರಾಜ-ಶೇಖರನು "ಎಲೈ ಬಂಧುಗಳೇ ಭಾರತ ಮಾತೆಯು, ಹಿಂದೂ ಧರ್ಮ ದೇವಿಯು ನಿಮ್ಮ ದೇಹದ ಕಡೆಯ ರಕ್ತದ ಬಿಂದುವನ್ನೂ, ತಮ್ಮ ಸೌಖ್ಯಕ್ಕಾಗಿ ಬೇಡುತಲಿ ದ್ದಾರೆ. ಆದ್ದರಿಂದ ಅವರನ್ನು ನಿರಾಸೆಮಾಡಿ, ರಣಾಂಗಣದಲ್ಲಿಂದ ಕಾಲ್ದೆಗೆಯುವದು, ಆರ್ಯ ಧರ್ಮದ, ವೀರ ಭಾರತಾಂಬೆಯ ಪುತ್ರ ರಾದ, ಶ್ರೀರಾಮಚಂದ್ರರ ವಂಶಜರಾದ ನಮಗೆ, ಕ್ಷತ್ರಿಯರಿಗೆ ಯೋಗ್ಯವಾದುದಲ್ಲ. ಆದ್ದರಿಂದ ನಿಮ್ಮ ಜೀವದಾಸೆಯನ್ನು ಬಿಟ್ಟು ಎದ್ದೇಳಿ. 'ಉತ್ತಿಷ್ಠತ ! ಜಾಗೃತ ! ಪ್ರಾಪ್ಯವರಾನ್ನಿಬೋಧತ! ಎಂಬ ನಿಮ್ಮ ಉಪನಿಷತ್ತಿನ ವಾಕ್ಯವನ್ನು ಇಂತಹ ಕಠಿಣ ಪ್ರಸಂಗ ದಲ್ಲಿ ಸ್ಮರಿಸಿ ಧೈರ್ಯವನ್ನು ತಂದುಕೊಳ್ಳಿರಿ" ಎಂದು ಹುರಿದುಂಬಿಸಲಾ ರಂಭಿಸಿದನು. ಇವನ ನುಡಿಗಳಿಂದ ಮತ್ತೆ ರಮೇಶನ ಸೈನ್ಯದವರು ಚೇತನಗೊಂಡು "ಮಾಡುವೆ, ಇಲ್ಲವೆ ಮಡಿಯುವೆ" ಎಂಬ ಧೃಡ-ನಿರ್ಧಾರದಿಂದ, ಯವನ ಸೈನಿಕರನ್ನು ಬೆನ್ನಟ್ಟಿ, ಹೆಣಗಳ ರಾಶಿಯನ್ನು ಕೂಡ ಹಾಕಹತ್ತಿದರು. ಇದರಿಂದ ರೊಚ್ಚಿಗೆದ್ದ ಒಬ್ಬ ಮುಸಲ್ಮಾನ ಸರದಾರನು, ನಮ್ರಭಾವದಿಂದ ಹಿಂದೂ ವೀರನಂತೆ ನಟಿಸುತ್ತ ಅವನ ಎದುರಿಗೆ ಬಂದು ಮೋಸದಿಂದ ಹೃದಯವನ್ನೇ ಭೇದಿಸಿದನು. ಇದನ್ನು ಶಿವಾಜಿ ಮಹಾರಾಜರು ನೋಡಿದವರೇ, ಅವ ನನ್ನು ತಮ್ಮ ಕುದುರೆಯ ಮೇಲೆ ಕೂಡ್ರಿಸಿಕೊಂಡು, ಅಲ್ಲಿಯೇ ಸಮೀ ಪದಲ್ಲಿರುವ ಗುಡಿಸಲಿಗೆ ಬಂದುಉಪಚರಿಸಹತ್ತಿದರು.

ಕ್ಷಣ ಹೊತ್ತು ಗತಿಸಿದ ನಂತರ ವೀರವರ ರಾಜಶೇಖರನು ಎಚ್ಚತ್ತು, ತನ್ನ ಪಕ್ಕದಲ್ಲಿ ಕುಳಿತು ಬಂಧುವಿನಂತೆ ಉಪಚರಿಸುತ್ತಿದ್ದ ಛತ್ರಪತಿ ಶಿವಾಜಿ ಮಹಾರಾಜರನ್ನು ದೃಷ್ಟಿಸಿ, ಆನಂದದಿಂದ 'ಮಹಾ ರಾಜ' ಎಂದು ಉದ್ಗರಿಸಿದನು. ಆಗ ಶಿವಾಜಿ ಮಹಾರಾಜರ ಕಣ್ಣು ಗಳಲ್ಲಿ ದುಃಖದಿಂದ ನೀರು ಹರಿದು, ಮಾತಾಡಲಿಕ್ಕೆ ನಾಲಿಗೆಯೇ ಏಳ ದಾಯಿತು. ಆದರೂ ಪ್ರಯಾಸದಿಂದ "ಬಂಧು ರಾಜ-ಶೇಖರಾ, ನಿನಗೆ ಇಂತಹ ಮೋಸದ, ಅನ್ಯಾಯದ ದುರ್ಮರಣವು ಒದಗಿ ಬಂದಿತೇ" ಎನ್ನಲು, ರಾಜಶೇಖರನು "ಶಿವಾಜಿ ಮಹಾರಾಜರೇ, ಭಾರತ ಮಾತೆಯ ಮಾಂಗಲ್ಯ ಸೂತ್ರವು, ಇನ್ನು ತಮ್ಮಂಥ ವೀರ ಪುತ್ರರ ಕಡೆಗೇ ಇದೆ. ನಾನು ಜೀವಿಸಿರುವವರೆಗೆ ಆಕೆಯನ್ನು ನನ್ನ ಪ್ರಾಣಕ್ಕಿಂತಲೂ ಮಿಗಿಲಾಗಿ ಆಕೆಯ ಸೇವೆಯನ್ನು ಮಾಡಿದೆನು. ಆದರೆ ಪರಮಾತ್ಮನ ಕೃಪೆಯಿಂದ ಇಲ್ಲಿಗೆ ಆಕೆಯ ಋಣಾನುಬಂಧವು ಮುಗಿಯಿತು. ಇನ್ನು ನಾನು ಹೋಗುತ್ತೇನೆ. ಆದರೆ ಇನ್ನೂ ಯುದ್ಧವು ಸಮಾಪ್ತಿಯಾಗಿಲ್ಲವೇ ?" ಎನ್ನುವದರೊಳಗಾಗಿಯೇ, ರಮೇಶ, ಅಜಿತ, ಮತ್ತು ಮಹಾರಾಣಾ ಜೋರಾವರಸಿಂಹ ಮೊದ ಲಾದವರು ಉಪಸ್ಥಿತರಾಗಿ, ಯುದ್ಧದಲ್ಲಿ ಜಯವನ್ನೂ, ಅಕಬರಖಾ ನನು ತನ್ನ ಸೈನಿಕರನ್ನು ಕೂಡಿಕೊಂಡು ದಿಲ್ಲಿಗೆ ಓಡಿ ಹೋದ ಸಂಗತಿ ಯನ್ನು ಸವಿಸ್ತಾರವಾಗಿ ಹೇಳಲು, ಮರಣೋನ್ಮುಖನಾದ ರಾಜಶೇಖ ರನಿಗೆ ಆನಂದಾಶ್ರುಗಳು ತುಂಬಿ "ಧನ್ಯನಾದೆ, ರಾಜಕುಮಾರ! ನನ್ನ ಜೀವನದಲ್ಲಿ ಕಡೆಯ ಸಲ ಜಯ-ಲಕ್ಷ್ಮಿಯು ಆರ್ಯ ಜನರಿಗೆ ಹಾಕಿದ ಮಾಲೆಯನ್ನು ನೋಡಿ, ನನ್ನ ಕಣ್ಣುಗಳು ಪುನೀತವಾದವು. ಇಂದಿಗೆ ನಾನು ನಿಶ್ಚಿಂತೆಯಿಂದ ಸಾಯುವೆನು. ಆದರೆ ಕಡೆಯ ಬಾರಿ ನನ್ನ ತಂಗಿ ಲೀಲಾದೇವಿ ಹಾಗೂ ಮಹಾನುಭಾವ ವಿಜಯಕುಮಾರನನ್ನು ನೋಡಬಯಸುತ್ತಿದ್ದೇನೆ" ಎನ್ನಲು ರಮೇಶನು ಅವರನ್ನು ಬಂಧ ಮುಕ್ತ ಮಾಡುವದಕ್ಕಾಗಿ ಹೊರಟನು. ಇಷ್ಟರಲ್ಲಿ ಚಂಪಾದೇವಿಯೂ

ಅಶ್ರುಗಳಿಂದ ಪರಿಪೂರ್ಣಿತವಾಗಿ ಅಲ್ಲಿಗೆ ಪ್ರವೇಶಿಸಿದಳು. ಆಗ ರಾಜಶೇಖರನು ಆಕೆಯನ್ನು ಕುರಿತು “ ದೇವೀ, ನಿನ್ನಯ ಪವಿತ್ರವಾದ ನಯನಗಳಲ್ಲಿ ಕಣ್ಣೀರು ! ಇವು ನನಗೆ ಒಳ್ಳೇ ಆಶ್ಚರ್ಯವನ್ನುಂಟು ಮಾಡುತ್ತಿವೆ. ಕೆಲವೊಂದು ಸಮಯಗಳಲ್ಲಿ ನಾನು ಎದೆಗುಂದಿದಾಗ ಆರ್ಯಜನರು, ತಮ್ಮ ಧರ್ಮದ, ದೇಶದ ಉದ್ಧಾರಕ್ಕಾಗಿ ಮೃತ್ಯುವನ್ನು ಕೂಡ ಎದುರಿಸಿ ಅಜರಾಮರವಾಗುವರು ’ ಎಂಬ ವೀರೋಕ್ತಿಗಳಿಂದ ನನ್ನನ್ನು ಹುರಿದುಂಬಿಸುತ್ತಿದ್ದ ನೀನು, ಇಂದು ಮೃತ್ಯುವಿನ ದವಡೆಯಲ್ಲಿ ಬಿದ್ದಿರಲು ಶೋಕಿಸುವದೇ ? ಹಾಗಾದರೆ ನಿನ್ನ ಉಳಿದ ಈ ಜನರೇನೆಂದಾರು ? ” ಎನ್ನಲು ಚಂಪಾದೇವಿಯು ಕಣ್ಣೀರನ್ನೊರೆಸಿಕೊಂಡು “ ಇಲ್ಲ ನಾಥಾ, ಭಾರತಾಂಬೆಯ ಉನ್ನತಿಗಾಗಿ, ಧರ್ಮದೇವಿಯ ಮುಕ್ತಿಗಾಗಿ, ದಧೀಚಿ ಮುನಿಯಂತೆ ತನ್ನ ದೇಹವನ್ನೇ ಅರ್ಪಿಸಿದ, ಭಾರತಮಾತೆಯ ವೀರಪುತ್ರ ರಾಜಶೇಖರನ ಪತ್ನಿ ಚಂಪಾದೇವಿ, ಎಂಬ ಅಭಿಮಾನದಿಂದ ಆನಂದಾಶ್ರುವಗಳನ್ನುದುರಿಸಿದೆನೇ ಹೊರ್ತು, ಎಂದಿಗೂ ದುಃಖಮಾಡಲಿಕ್ಕಿಲ್ಲ. ನಾಶವುಳ್ಳ ಈ ದೇಹವು ಎಂದಾದರೊಂದು ದಿನ ಸಾಯಲೇಬೇಕು. ಆದರೆ ಒಂದು ಮಹಾನ್ ಕಾರ್ಯಕ್ಕಾಗಿ ನೀಗಿದ ಈ ಪ್ರಾಣಕ್ಕಾಗಿ ತಮ್ಮ ಅರ್ಧಾಂಗಿನಿಯು ಎಂದಾದರೂ ದುಃಖ ಮಾಡುವಳೇ?” ಎನ್ನಲು, ಎಲ್ಲರೂ ‘ಧನ್ಯ ಧನ್ಯ’ ಎಂದು ಉದ್ಗಾರ ತೆಗೆದರು. ಇಷ್ಟರಲ್ಲಿ ರಾಜಶೇಖರನಿಗೆ ಬಿಕ್ಕು ಹತ್ತಲಾರಂಭಿಸಿತು. ಆದರೂ ಬಹು ಪ್ರಯಾಸದಿಂದ “ ಪ್ರಿಯೇ, ಇಕೋ ನೋಡು. ನಿನ್ನಿನ ದಿನ ನೀನು ಹಚ್ಚಿದ ಸೌಭಾಗ್ಯ ತಿಲಕವು, ಇನ್ನೂ ಅಚ್ಚಳಿಯದೆ ಇದೆ. ಇದೇ ಮಂಗಲ ತಿಲಕವನ್ನು ಉಳಿದ ಎಲ್ಲ ಸತ್ಪುತ್ರರಿಗೂ ಹಚ್ಚಿ, ಅವರಿಗೆ ಮಂಗಲಾಶೀರ್ವಾದವನ್ನು ನೀಡು ” ಆಗ ಶಿವಾಜಿ ಮಹಾರಾಜರು “ ರಾಜಶೇಖರಾ, ಇಷ್ಟು ದಿನಗಳವರೆಗೆ ಭರತ ದೇಶದಲ್ಲಿ ಮಡಿದ ಎಲ್ಲ ಹುತಾತ್ಮರ ಆತ್ಮಗಳಿಗೆ, ನೀನಿಂದು ಮಾಡಿದ ಬಲಿದಾನದಿಂದ ಶಾಂತಿ ಸಿಗಲಿ. ಭಾರತ ಮಾತೆಯ ಮಸ್ತ

ಕವು, ನಿನ್ನಂತಹ ವೀರ ಪುತ್ರರ ಬಲಿದ್ಧಾನದಿಂದ ಉನ್ನತವಾಗಲಿ. ನಿನ್ನಯ ಬಲಿದಾನವು ಸೂರ್ಯ-ಚಂದ್ರರಿರುವವರೆಗೂ ಅಜರಾಮರ ವಾಗಿರಲಿ" ಎಂದು ಹರಸಿದರು. ಆಗ ರಾಜಶೇಖರನು "ನನ್ನಯ ಬಲಿದಾನದಿಂದ ಆರ್ಯ ಜನರಲ್ಲಿಯ ಪ್ರೇಮವು, ಭಾರತಮಾತೆಯ ಕಲ್ಯಾಣವು ಸೂರ್ಯ-ಚಂದ್ರಮರ ಪ್ರಕಾಶದಂತೆ ಶುಭ್ರವಿದ್ದು, ಅಜ ರಾಮರವಿರಲಿ" ಎಂದು ಹೇಳಿ, ತನ್ನ ಎಲ್ಲ ಸೈನಿಕ ಬಾಂಧವರಿಗೆ ಭಾರತಮಾತೆಯ ಜಯಜಯಕಾರವನ್ನು ಮಾಡ ಹೇಳಿ, ತಾನೂ ಜಯ ಭಾರತಾಂಬೆ! ವಿಶ್ವದಲ್ಲಿ ನಿನ್ನ ಕೀರ್ತಿಯು, ಕೇವಲ ಐದು ಜನ ನಿನ್ನ ವೀರಪುತ್ರರಿರುವತನಕೂ, ಇಷ್ಟೇ ಅಲ್ಲ ಸೂರ್ಯ-ಚಂದ್ರ ಮರು ತಮ್ಮ ಪ್ರಕಾಶವನ್ನು ಬೀರುತ್ತಿರುವವರೆಗೂ, ನಿನ್ನಯ ಕೀರ್ತಿಯು ದೇದಿಪ್ಯಮಾನವಾಗಿ ಬೆಳಗಲಿ" ಎಂದು ಗುಣಗಾನ ಮಾಡುತ್ತ ಪ್ರಾಣವನ್ನು ಬಿಟ್ಟನು.

ಇತ್ತ ಭಾಗ್ಯ-ಸೂರ್ಯನು ಅಸ್ತಂಗತವಾದ ಬಳಿಕ, ದುರ್ದೈವಿ ರಮೇಶನು, ಲೀಲಾವತಿ, ವಿಜಯಕುಮಾರರನ್ನು ಕರಕೊಂಡು ಬಂದನು. ರಾಜಶೇಖರನ ಪತ್ನಿ ಚಂಪಾದೇವಿಯೂ ತನ್ನ ಸತೀ ಧರ್ಮದಂತೆ ಸಹಗಮನ ಮಾಡಲು ಸಿದ್ಧಳಾದಳು. ಈ ದೃಶ್ಯವನ್ನು ಕಂಡ ಲೀಲಾದೇವಿಗಂತೂ ಮಾತುಗಳೇ ಹೊರಡದಾದವು. ಶಿವಾಜೀ ಮಹಾರಾಜರೂ, ಜೋರಾವರಸಿಂಹನೂ ಎಷ್ಟೋ ಸಮಾಧಾನ ಹೇಳಿದ ಬಳಿಕ, ಕಡೆಗೆ "ಅಕ್ಕಾ, ಪತಿವ್ರತಾ ಸ್ತ್ರೀಯಳಾದ ನೀನು, ಆರ್ಯ ಧರ್ಮದ ವಿರುದ್ಧ ಪ್ರವರ್ತಿಸಲು ನಾನು ಹೇಗೆ ಉಪದೇಶಿ ಸಲಿ? ಈ ದೇಶದಲ್ಲಿ, ನಾನು ಎಷ್ಟೋ ಜನ ಅಣ್ಣಂದಿರನ್ನು ಪಡೆಯ ಬಲ್ಲೆ. ಆದರೆ ಪ್ರಸಂಗಕ್ಕೆ ತಕ್ಕ ಹಾಗೆ ಉಪದೇಶಿಸಿ, ಸಾಕ್ಷಾತ್ ಜಗನ್ಮಾತೆ ಅಂಬಾಭವಾನಿಯ ಹಾಗೆ ಧೈರ್ಯವನ್ನು ನೀಡಬಲ್ಲ, ನಿನ್ನಂತಹ ಅಕ್ಕಂದಿರು ಮಾತ್ರ ವಿರಳ. ಇದಕ್ಕಾಗಿಯೇ ನನಗೆ ಕಡು ದುಃಖವಾಗುತ್ತಿದೆ. ನನ್ನ ಭವಿಷ್ಯದಲ್ಲಿ ಕಗ್ಗತ್ತಲೆಯು ಕಾಣಿಸುತ್ತಿದೆ"

ಎನ್ನಲು, ಚಂಪಾದೇವಿಯು ಪ್ರೇಮಾಶ್ರುಗಳಿಂದ “ ತಂಗೀ ಲೀಲಾ, ಹೀಗೆ ಹುಚ್ಚಳಂತೆ ನುಡಿಯಬೇಡ. ಪ್ರಸಂಗಕ್ಕೆ ತಕ್ಕಂತೆ ಪರಮೇಶ್ವರನು ತನ್ನ ಸದ್ಭಕ್ತರಿಗೆ ಯೋಗ್ಯವಾದ ಮಾರ್ಗವನ್ನೂ, ಧೈರ್ಯವನ್ನೂ ನೀಡುತ್ತಾನೆ. ಆದ್ದರಿಂದ ಆತನ ಚರಣಕಮಲಗಳಲ್ಲಿ ನೀನು ವಿಶ್ವಾಸವನ್ನಿಡು. ಆದರೆ ಹಿಂದಿನ ಸಲದಂತೆ ಧೈರ್ಯವನ್ನು ಕಳಕೊಂಡು, ಆತ್ಮಹತ್ಯೆಯ ಮಹಾಪಾತಕಕ್ಕೆ ಗುರಿಯಾಗಬೇಡ ” ಎಂದು ಉಪದೇಶಿಸಿದಳು. ಇವಳ ಅಮರವಾಣಿಯಿಂದ ಎಲ್ಲರ ಕಣ್ಣುಗಳಲ್ಲಿಯೂ ಆನಂದಾಶ್ರುಗಳು ತುಂಬಿ ಬಂದವು. ಎಲ್ಲ ಸ್ತ್ರೀಯರನ್ನೂ ಮಾತೆಯ ಸಮವಾಗಿ ನೋಡುತ್ತಿದ್ದ ಛತ್ರಪತಿ ಶಿವಾಜಿ ಮಹಾರಾಜರಿಗಂತೂ ಸಾಕ್ಷಾತ್ ಜಗನ್ಮಾತೆಯೇ ಬಂದು ತಮ್ಮೆಲ್ಲರಿಗೂ ಉಪದೇಶಿಸಹತ್ತಿರುವಳೆಂದು ಭಾವಿಸಿ, ಆಕೆಯ ಎದುರಿಗೆ ಹೋಗಿ ನತಮಸ್ತಕರಾಗಿ “ ಮಾತೇ ಜಗಜ್ಜನನೀ, ನಿನ್ನಯ ಅಮರವಾಣಿಯನ್ನು ನಾನಿಂದು ಕೇಳಿ ಧನ್ಯನಾದೆ. ನಿನ್ನಂತಹ ಪತಿವ್ರತಾ ಸ್ತ್ರೀಯರು ತಮ್ಮಯ ಸೌಭಾಗ್ಯ ತಿಲಕವನ್ನು ಆನಂದದಿಂದ ತ್ಯಾಗ ಮಾಡುತ್ತಿರುವರೆಂತಲೇ, ಭಗವಾ ಧ್ವಜಕ್ಕೆ ತ್ಯಾಗ ವರ್ಣದ ಕೆಂಪು ಬಣ್ಣವು ಕೂಡಿದೆ. ಅಂತಹ ಪವಿತ್ರ ಧ್ವಜವನ್ನೇ ಭಾರತಮಾತೆಯು ಹಸ್ತದಲ್ಲಿ ಧರಿಸಿರುವದರ ಮೂಲಕ ಶೋಭಾಯಮಾನವಾಗಿ ಕಾಣುತ್ತಿರುವಳು ” ಎಂದನು. ಆಗ ಅಲ್ಲಿ ನೆರೆದಿದ್ದ ಜನರೆಲ್ಲರೂ ಮೊಳಕಾಲೂರಿ ಆಕೆಗೆ ವಂದಿಸಿದರು. ಚಿತೆಯು ತಯಾರಾಗಿದ್ದರಿಂದ ಚಂಪಾದೇವಿಯು ಅವರೆಲ್ಲರನ್ನು ಆಶೀರ್ವದಿಸಿ, ದೇವರನ್ನು ಕುರಿತು “ ಹೇ ಸದ್ಗುರೋ, ಒಂದು ವೇಳೆ ನನಗೆ ಜನ್ಮವನ್ನು ದಯಪಾಲಿಸುವವನಾಗಿದ್ದರೆ, ಇದೇ ಭರತಖಂಡದಲ್ಲಿ, ಆರ್ಯವಂಶದಲ್ಲಿಯೇ ನನಗೆ ಜನ್ಮವನ್ನೀಡು ” ಎಂದು ಪ್ರಾರ್ಥಿಸಿ, ಅಗ್ನಿನಾರಾಯಣನಿಗೆ ತನ್ನ ದೇಹವನ್ನರ್ಪಿಸಿ ಧನ್ಯಳಾದಳು.

ಆಯಿತು! ಮೇವಾಡದ ಕರುಣಾಪೂರಿತ ದೃಶ್ಯವು ಇಲ್ಲಿಗೆ ಮುಗಿಯಿತು !! ಎರಡು ದಿನಗಳ ಭೀಕರ ರಣಸಂಗ್ರಾಮವಾದನಂತರ ಭಾರತ ಮಾತೆಯ ಸತ್ಪುತ್ರ ರಾಜಶೇಖರನ ಬಲಿದಾನದ ನಂತರ ರಾಜಕುಮಾರಿ ಲೀಲಾವತಿ, ವಿಜಯಕುಮಾರರ ಬಿಡುಗಡೆಯಾಯಿತು. ಅಂತೂ ಎರಡು ದಿನಗಳವರೆಗೆ ಯಾರ ಮನಸ್ಸಿಗೂ ಸಮಾಧಾನ ವಾಗಲಿಲ್ಲ. ಅವರ ಹೆಸರು ಮಾತ್ರ ಇಂದಿಗೂ ಆದರ್ಶವಾಗಿ ಅವರ ಜೀವನವು ಇಂದಿಗೂ ಹಿಂದುಗಳಾದ ನಮಗೆ ಸ್ಫೂರ್ತಿಯನ್ನು ಕೊಡುತ್ತದೆ. ಭಾರತಮಾತೇ ಇಂತಹ ಜನರೇ, ತನ್ನ ಕೀರ್ತಿಯನ್ನು ಹೆಚ್ಚಿಸುವ ಸತ್ಪುತ್ರರೇ ಪ್ರಿಯರಲ್ಲವೇ ?

## ೧೫

ಕಡೆಗೊಂದು ಸುಮುಹೂರ್ತದಲ್ಲಿ ಮಹಾರಾಣಾ ಶಾರ್ದೂಲ ಸಿಂಹನು, ತನ್ನ ಮಗಳಾದ ಲೀಲಾವತಿಯನ್ನು, ರಾಜಕುಮಾರ ರಮೇಶನ ಹಾಗೂ ಆಕೆಯ ಒಪ್ಪಿಗೆಯಂತೆ, ವಿಜಯಕುಮಾರನಿಗೆ ಧಾರೆಯೆರೆದು ಕೊಟ್ಟನು. ಇವರಿಂದ ಎಲ್ಲರಿಗೂ ಆನಂದವಾಗಿ, ಮಹಾರಾಣಾ ಜೋರಾವರಸಿಂಹ, ಛತ್ರಪತಿ ಶಿವಾಜಿ ಮಹಾರಾಜ ಮೊದಲಾದ ಎಲ್ಲ ಹಿರಿಯರು, ಆ ನವದಂಪತಿಗಳಿಗೆ ಆಶೀರ್ವಾದವನ್ನು ಕೊಟ್ಟರು.

ಒಂದು ಪೂರ್ಣಿಮೆಯ ರಾತ್ರಿ. ಎಂದಿನಂತೆ ಸ್ವೇಚ್ಛಾಚಾರಿಯಾದ ವಿಜಯಕುಮಾರನು, ಸೆರೆಮನೆಯ ಪಂಜರದಲ್ಲಿ ಸಿಕ್ಕಬೇಕಿದ್ದರಿಂದ, ಮನಸ್ವೇಚ್ಛೆಯಿಂದ ಅಡ್ಡಾಡುತ್ತ, ಅಡ್ಡಾಡುತ್ತ, ಹಿಂದಿನ ಸಲ ಬಂದು ಕುಳಿತ ಸ್ಥಳದಲ್ಲಿಯೇ ವಿಶ್ರಮಿಸಿದನು. ಆಗ ಅವನು ಆನಂದದಿಂದ ತನಗೆ ತಾನೇ ತಿಳಿಯದಂತೆ ಹಾಡುಗಳನ್ನು ಹಾಡುತ್ತಿದ್ದನು. ಆದರೆ ಮರುಕ್ಷಣದಲ್ಲಿಯೇ ತನಗಿಂತಲೂ ಇಂಪಾದ,

ಮಂಜುಳ ಗಾನವು ಕೇಳಬರಹತ್ತಿತು. ಆ ಪ್ರೇಮ ಮಧುರ ಗೀತ ವನ್ನು ಯಾವಾಗಲೋ ಕೇಳಿರುವೆನೆಂದು ಅನಿಸಹತ್ತಿತು. ಆಗ ಅವನಿಗೆ ಒಮ್ಮೆಲೇ ಲೀಲಾದೇವಿಯು ನೆನಪಾಗಿ 'ಲೀಲೆ' ಎಂದು ಉದ್ಗರಿಸಿದನು. ಆಗ ಅವಳೂ ಅಲ್ಲಿ ಬಂದು 'ನಾಥಾ' ಎಂದು ಕೂಗಿದಳು. ಆಗ ವಿಜಯಕುಮಾರನು ಎದ್ದು ಅವಳ ಕೈಹಿಡಿದು ಸ್ವಾಗ ತಿಸಿ, ಹರಟೆಯಿಂದ, "ಬನ್ನಿ ಮಹಾರಾಣಿಯವರೇ, ಬರುತ್ತಿರೋ ಇಲ್ಲವೋ ಎಂದು ಶಂಕೆಗೊಂಡಿದ್ದನು. ಆದರೆ ಉಪಸ್ಥಿತರಾದರೇ ಅಲ್ಲ" ಎಂದು ನಕ್ಕನು. ಇದರಿಂದ ಲೀಲಾದೇವಿಗೆ ಅಪಮಾನವಾ ದಂತಾಗಿ "ಬಿಡಿರಿ. ಈ ತರದ ಅಪಹಾಸ್ಯ ಮಾಡುವಂತಿದ್ದರೆ ನಾನು ಇನ್ನು ಮೇಲೆ ಬರುವದೇ ಇಲ್ಲ" ಎಂದು ಅವನೆಡೆಗೆ ಬೆನ್ನು ಮಾಡಿ ಕುಳಿತಳು. ಇದರಿಂದ ಮತ್ತಿಷ್ಟು ಸ್ಫೂರ್ತಿಗೊಂಡು ವಿಜಯ ಕುಮಾರನು, ಆಕೆಯ ಕಡೆಗೆ ಮುಖ ಮಾಡಿ "ಓಹೋ, ಮಹಾರಾ ಣಿಯವರಿಗೆ ಈಗಾಗಲೇ ಕೋಪ ಬಂದಿತೇನು? ಆ ಕೋಪವು ಈ ಮೂಗಿನ ಮೇಲೆಯೇ ಇರುವದಿಲ್ಲ!" ಎಂದು ಮೂಗಿನ ಮೇಲೆ ಹೊಡೆದು, ಆಕೆಯ ಹೆಗಲ ಮೇಲೆ ಕೈ ಹಾಕಿ "ದೇವೀ ಅಕೋ ನೋಡು ಭಗವಾನ ಸೋಮದೇವನು, ತನ್ನ ಕಂಟಕವನ್ನು ತೀರಿ ಸಿಕೊಂಡು ಹೇಗೆ ಶೋಭಾಯಮಾನವಾಗಿ ಕಾಣುತ್ತಿದ್ದಾನೆ" ಎಂದನು. ಆಗ ಲೀಲಾದೇವಿಯೂ ಆನಂದದಿಂದ "ಅಹುದು ನಾಥ. ಅಂದಿನ ಹಾಗೂ ಇಂದಿನ ದಿನದ ಸೃಷ್ಟಿಯ ಸೊಬಗಿನಲ್ಲಿ ಎಷ್ಟು ಭೇದ ಕಾಣುತ್ತಿದೆ. ಅಲ್ಲವೇ?" ವಿಜಯಕುಮಾರನು "ಲೀಲಾ' ಅಂದು ಚಂದ್ರಮನಿಗೆ ಕಪ್ಪು ಮೋಡದ ಛಾಯೆ ಇದ್ದದ್ದರಿಂದ, ಸೃಷ್ಟಿಯ ಸೊಬಗಿಗೆ ಅದು ಬಾಧೆಯಾಗಿತ್ತು. ಆದರೆ ಅದು ಅಷ್ಟಕ್ಕೆ ನಿಲ್ಲದೆ, ಪ್ರಕೃತಿ ದೇವಿಯಿಂದ ಸ್ಫೂರ್ತಿಗೊಂಡ ಚಂದ್ರನು, ತನ್ನ ಮೇಲಿರುವ ಕಪ್ಪು ಛಾಯೆಯ ಕಂಟಕಕನ್ನು ಪರಿಹರಿಸಿಕೊಂಡು, ಸೃಷ್ಟಿದೇವಿಗೆ ತನ್ನ ಕಾಂತಿಯನ್ನು ಬೀರುತ್ತಲಿದ್ದಾನೆ."

ಈ ಮಾತುಗಳನ್ನು ದೂರದಿಂದ ರಮೇಶ ಹಾಗೂ ಛತ್ರಪತಿ ಶಿವಾಜಿ ಮಹಾರಾಜರು ಕೇಳುತ್ತಿದ್ದರು. ಆಗ ಶಿವಾಜಿ ಮಹಾರಾಜರು ಆನಂದದಿಂದ “ ಧನ್ಯ ವಿಜಯಕುಮಾರ ನೀನಾದರೂ ಆ ಚಂದ್ರನಂತೆಯೇ ಬೆಳಗಿ, ಭರತ-ಖಂಡಕ್ಕೇ ಕಾಂತಿಯನ್ನು ಬೀರು. ಈ ನಿನ್ನ ಇತಿಹಾಸದಿಂದ ಮುಂದಿನ ನಮ್ಮ ಜನಾಂಗಕ್ಕೆ ಸ್ಫೂರ್ತಿ ಸಿಕ್ಕಿ, ಆರ್ಯ ಧರ್ಮವು ಎಂದೂ ಕುಗ್ಗದಂತಿರಲಿ. ” ಎಂದು ಅವನ ಮುಂದೆ ಬಂದರು. ಆಗ ವಿಜಯಕುಮಾರ, ಹಾಗೂ ಅವನ ಪತ್ನಿ ಲೀಲಾದೇವಿ ಇಬ್ಬರೂ ಎದ್ದು ಶಿವಾಜಿ ಮಹಾರಾಜರಿಗೆ ವಂದಿಸಿದರು. ಆಗ ಶಿವಾಜಿ ಮಹಾರಾಜರು ‘ಸೌ’ ಭಾಗ್ಯವತಿಯಾಗು ಮಗಳೇ ಸೀತಾ ಸಾವಿತ್ರಿ ಮಾತೆಯರ ಹಾಗೆ ಆದರ್ಶಪತ್ನಿಯಾಗು. ಸೂರ್ಯ-ಚಂದ್ರರಿರುವವರೆಗೆ ನಿಮ್ಮೀರ್ವರ ಹೆಸರುಗಳು ಅಜರಾಮರವಾಗಿರಲಿ ಎಂದು ಹರಸಲು, ವಿಜಯಕುಮಾರನು “ ವೀರ ಶಿವಾಜೀ, ಇದೆಲ್ಲವೂ ಅವತಾರೀ ಪುರುಷರಾದ ತಮ್ಮದೇ ಕೃಪೆ ” ಎಂದು ಮನೆಯ ಕಡೆಗೆ ಹೊರಟರು.

೧೬

ಒಂದು ದಿನ ಮಧ್ಯಾಹ್ನ ಊಟವಾದ ನಂತರ ರಾಜಕುಮಾರ ರಮೇಶ, ಅಜಿತ, ವಿಜಯಕುಮಾರ ಹಾಗೂ ಛತ್ರಪತಿ ಶಿವಾಜಿ ಮಹಾರಾಜರು ಹರಟೆಯಾಡುತ್ತ, ಕುಳಿತಿದ್ದರು. ಮಹಾರಾಣಾ ಶಾರ್ದೂಲಸಿಂಹರೂ, ಮಹಾರಾಣಾ ಜೋರಾವರಸಿಂಹನನ್ನು ಕರಕೊಂಡು ಪ್ರೇಕ್ಷಣೆಯ ಸ್ಥಳಗಳನ್ನು ತೋರಿಸಲು ಹೋಗಿದ್ದರು. ಆಗ ವಿಜಯಕುಮಾರನು ಮಹಾರಾಣಾ ಜೋರಾವರಸಿಂಹರು ತಮ್ಮ ರಾಜಧಾನಿಗೆ ಬರಹೇಳಿದ್ದಾರೆಂದು, ಶಿವಾಜಿ ಮಹಾರಾಜರಿಗೆ ಆಮಂತ್ರಣವನ್ನಿತ್ತನು. ಆದರೆ ಶಿವಾಜಿ ಮಹಾರಾಜರು, ತಾವು ಬಂದು ಬಹಳ ದಿವಸಗಳಾದದ್ದರಿಂದ, ತಮ್ಮ ರಾಜ್ಯದ ವ್ಯವಸ್ಥೆಯು

ಹೇಗಿದೆಯೋ, ಎಂಬ ಚಿಂತೆಯಿಂದ ನಿರಾಕರಿಸಿ, ಅವರಂಗಜೇಬನಿಂದ ತಮಗೂ ಆಗುತ್ತಿರುವ ತ್ರಾಸವನ್ನು ವರ್ಣಿಸಿದರು. ಆದರೆ ವಿಜಯ ಕುಮಾರನು ಅವರ ಮಾತಿಗೆ ಪದೇ ಪದೇ ನಿರಾಕರಿಸಿ, ಅವರನ್ನು ಒತ್ತಾಯಪಡಿಸಿದ್ದರಿಂದ, ಶಿವಾಜಿ ಮಹಾರಾಜರೂ, ವಿಜಯಕು ಮಾರನು ಪುಣೆಗೆ ಬರಲು ಇಚ್ಛಿಸಿದರೆ, ತಾವು ಅಲ್ಲಿ ಬರಲು ಒಪ್ಪಿಗೆ ಯಿದೆಯೆಂದು, ಎಲ್ಲರಿಗೂ ಆಮಂತ್ರಣವನ್ನಿತ್ತರು. ಅಷ್ಟರಲ್ಲಿ ಮಹಾ ರಾಣಾ ಶಾರ್ದೂಲಸಿಂಹರೂ, ಜೋರಾವರ ಸಿಂಹನನ್ನು ಕರಕೊಂಡು ಅಲ್ಲಿಗೆ ಆಗಮಿಸಿದರು. ಆಗ ಶಾರ್ದೂಲ ಸಿಂಹರು “ ಎಲ್ಲಿಯವರೆಗೆ ನಮ್ಮ ಆರ್ಯಾವರ್ತ ದೇಶದಲ್ಲಿ, ಮಹಾರಾಣಾ ಜೋರಾವರಸಿಂಹ ಹಾಗೂ ವೀರ ಶಿವಾಜಿ ಮೊದಲಾದ ವೀರರಂತೆ ಧರ್ಮಾಭಿಮಾ ನಿಗಳು ಜನಿಸುವರೋ ಅಲ್ಲಿಯವರೆಗೆ ನಮ್ಮ ಮಾತೆಯು ಯಾವ ಪರಕೀಯನಿಗೂ ತಲೆಬಾಗಿಸಲಾರಳು. ಒಂದು ವೇಳೆ ನಮ್ಮ ಆರ್ಯ ಸ್ತ್ರೀಯರಿಗೆ ಮಾನಹರಣವಾಗುವ ಪ್ರಸಂಗ ಬಂದರೆ, ಪದ್ಮಿನೀ ಮಾತೆಯ ಹಾಗೆ ತಮ್ಮ ದೇಹವನ್ನು ಅಗ್ನಿನಾರಾಯಣನಿಗರ್ಪಿಸಿ, ಸ್ವರ್ಗ ಸೋಪಾನವನ್ನೇರಿ, ಆರ್ಯ ಜನರಿಗೆ ಮಾರ್ಗದರ್ಶಕರಾಗು ವರೇ ಹೊರ್ತು, ಪರಕೀಯರಿಗೆ ತಮ್ಮ ಒಂದು ಕೂದಲೆಳೆಯನ್ನು ಕೂಡ ತೋರಿಸಲಾರರು ” ಎಂದು ನುಡಿಯಲು, ಶಿವಾಜಿ ಮಹಾರಾ ಜರು ನಸುನಕ್ಕು “ ಮಹಾರಾಣಾ, ದುಷ್ಟರ ಶಾಸನವನ್ನು ಮಾಡತಕ್ಕ ಭಗವಾನ ನಾರಾಯಣನೇ, ಇಲ್ಲಿ ಅವತರಿಸುವನೆಂದ ಬಳಿಕ ಭರತ ದೇಶವು ನಿರ್ಬಲವಾಗಬಲ್ಲದೇ ? ‘ ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ । ಅಭ್ಯುತ್ಥಾನಮ್ ಧರ್ಮಸ್ಯ ತದಾತ್ಮಾನಾಂ ಸೃಜಾಮ್ಯಹಂ॥ ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚದುಷ್ಕೃ ತಾಮ್ । ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥ ’ ಎಂದು ವಚನ ಕೊಟ್ಟ ಪರಮಾತ್ಮನು, ಆರ್ಯ

ಧರ್ಮದೇವಿಯನ್ನು ಉದ್ಧರಿಸಲು ಆತನೇ ಓಡಿ ಬರುವನಲ್ಲವೇ ? ಈ ಜನ್ಮದಲ್ಲಿ ಕರ್ತವ್ಯಕ್ಕಷ್ಟೇ ನಾವು ಹೊಣೆಗಾರರು. ಆವನ ಇಚ್ಛೆಯಂತೆ ಕರ್ಮ ಮಾಡುವದೊಂದೇ ನಮ್ಮ ಕೆಲಸ ಆದರೆ ಕರ್ಮ ಫಲದಾಸೆಗಾಗಿ ಅಲ್ಲ. ಇದನ್ನೇ ಭಗವಾನ ಶ್ರೀಕೃಷ್ಣ ಪರಮಾತ್ಮರು ಅರ್ಜುನನಿಗೆ ‘ ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ । ಮಾ ಕರ್ಮಫಲ ಹೇತುರ್ಭೂರ್ಮಾ ತೇ ಸಂಗೋಸ್ತ್ವ ಕರ್ಮಣಿ॥ ಎಂದು ಉಪದೇಶಿಸುತ್ತಾರೆ. ” ಆಗ ರಾಜಕುಮಾರ ರಮೇಶನು ನಗುತ್ತ ಹರಟೆಯಿಂದ “ ಅಂತೂ ಮಹಾರಾಜರು ಕೇವಲ ಕ್ಷತ್ರಿಯರಷ್ಟೇ ಆಗಿರದೆ, ಸಮಯಕ್ಕೆ ತಕ್ಕಂತೆ ಅಜ್ಞಾನೀ ಜನರಿಗುಪದೇಶಿಸುವ ತತ್ವಜ್ಞಾನಿಗಳೂ ಆಗಿದ್ದಾರೆ ” ಎನ್ನಲು ಎಲ್ಲರೂ ತುಸು ನಕ್ಕರು. ಆಗ ರಾಜಕುಮಾರಿ ಲೀಲಾವತಿಯು ಅಲ್ಲಿ ಪ್ರವೇಶಿಸಲು, ಅಜಿತನು ಆಕೆಯನ್ನು ಕುರಿತು “ ಲೀಲಾ, ಕಡೆಗೆ ಪರಮಾತ್ಮನು ನಿನ್ನ ಮೇಲೆಯೂ ಸಂಕಟವನ್ನೊಡ್ಡಿ, ನಿನ್ನಯ ಸತ್ವವನ್ನು ಸೀತಾ, ಸಾವಿತ್ರಿ, ದಮಯಂತಿ, ಮೊದಲಾದ ಆರ್ಯ ಸ್ತ್ರೀಯರಂತೆ ಹರಡಿಸಿದನು ” ಆಗ ಶಿವಾಜಿ ಮಹಾರಾಜರು ಅವರೆಲ್ಲರನ್ನು ಕುರಿತು “ ಆರ್ಯ ಧರ್ಮದ ತೇಜವೇ ಅಷ್ಟು ಉಜ್ವಲವಿದೆ. ಅಂತೆಯೇ ಕರ್ನಾಟಕದಲ್ಲಿ ನಮಗಿಂತಲೂ ಶೂರಳಾದ ವೀರಾಗ್ರೇಸರಿಣಿಯೊಬ್ಬಳಿರುವಳು. ಆ ಸಿಂಹಣಿಯು ಅಲ್ಲಿ ರಾಜ್ಯವಾಳುತ್ತಿರುವದರಿಂದಲೇ, ಈ ಮ್ಲೇಚ್ಛನು ಅಲ್ಲಿ ಕಣ್ಣೆತ್ತಿಯೂ ಕೂಡ ನೋಡಲಾರನು. ಒಮ್ಮೆ ನಾನು ತಂಜಾವರದಿಂದ ಬರುತ್ತಿರುವಾಗ, ಅಲ್ಲಿ ಸೈನ್ಯವನ್ನಿಳಿಸಿ ಗೌರಾಂಬೆಯ ಮಂದಿರಕ್ಕೆ ಹೋಗಿದ್ದೆನು. ಆಗ ನನ್ನಲ್ಲಿಯ ಕೆಲ ದುಷ್ಟರು ಯುದ್ಧವನ್ನು ಹೂಡಿ, ಆಕೆಯ ಪತಿಯನ್ನು ವಧಿಸಿ, ಆಕೆಯನ್ನೂ ಮೋಸದಿಂದ ಸೆರೆ ಹಿಡಿದು, ನಾನು ಅಲ್ಲಿ ಹೋಗುವದರೊಳಗಾಗಿ, ನನ್ನೆದುರಿಗೆ ತಂದು ನಿಲ್ಲಿಸಿದರು. ಆಗ ನಡೆದ ಎಲ್ಲ ವೃತ್ತಾಂತವನ್ನು ತಿಳಕೊಂಡು, ಮೋಸತನದಿಂದ ಪುಂಡಾಟಿಕೆ ನಡೆ

ಸಿದ ನನ್ನ ಸೇನಾನಾಯಕನನ್ನು ಶಿಕ್ಷೆ ಮಾಡಲು ತಯಾರಾದೆನು. ಆದರೆ ಪವಿತ್ರವಾದ ಆ ಮಾತೃ-ಹೃದಯವು, ತನ್ನ ಪತಿಯ ಮರಣದ ದುಃಖವನ್ನೂ ಕೂಡ ಮರೆತಿತಲ್ಲದೆ, 'ಅಣ್ಣಾ, ಜಗತ್ತಿನಲ್ಲಿ ಸಜ್ಜನರೂ, ದುರ್ಜನರೂ ಇರುವದರಿಂದಲೇ, ಪ್ರಕೃತಿದೇವಿಯಿಂದ ಪರಮೇಶ್ವರನ ಆಟವು ನಡೆಯುವದು. ಆದ್ದರಿಂದ ಆತನನ್ನು ಶಿಕ್ಷಿಸುವ ಅಧಿಕಾರವು ಆ ಪರಮಾತ್ಮನದೇ ಹೊರ್ತು ನನ್ನ ನಿನ್ನದಲ್ಲ ' ಎಂದು ಅವನನ್ನು ಕ್ಷಮಿಸಲು ಬಿನ್ನವಿಸಿಕೊಂಡಳು. ಬಂಧುಗಳೇ, ಆಗಿನ ಆಕೆಯ ಉಪದೇಶದ ನುಡಿಗಳು ಇನ್ನೂ ನನ್ನ ರೋಮ ರೋಮಗಳಲ್ಲಿ ಹರಿದಾಡುತ್ತಿವೆ. ಆ ಸಮಯದಲ್ಲಿ ನಾನು ದರ್ಶನಕ್ಕೆ ಹೋಗಿದ್ದ ಜಗಜ್ಜನನಿ ಮಾತೆಯೋ ಬಂದಿರುವಳೋ ಎಂದು ಭಾವಿಸಿ, ಆಕೆಯ ಪುಣ್ಯಮೂರ್ತಿಯನ್ನು ಹೃದಯದಲ್ಲಿಟ್ಟುಕೊಂಡು, ಆಕೆಯ ಆಶೀರ್ವಾದ ಪಡೆದು, ಸದ್ಗುರು ಶ್ರೀ ಸಮರ್ಥ ರಾಮದಾಸ ಸ್ವಾಮಿಗಳಿಗೆ ನಡೆದ ವೃತ್ತಾಂತವನ್ನೆಲ್ಲ ಸವಿಸ್ತಾರವಾಗಿ ತಿಳಿಸಿದೆ. ಆಗ ಅವರೂ ಈ ಸಂಗತಿಯಿಂದ ಕಡುನೊಂದು “ ಶಿವಬಾ, ಚಂದ್ರನಿಗೆ ತನ್ನ ಗುರುವಿನಿಂದ ಬಂದ ಕಲಂಕದಂತೆ, ನಿನಗಾದರೂ ನಿನ್ನ ಅನುಯಾಯಿಗಳಿಂದ ನಿನ್ನ ಸದ್ಗುಣದ ಕೀರ್ತಿಗೆ ಇದೊಂದು ಕಲಂಕವೊದಗಿತು. ಆದ್ದರಿಂದ ಮುಂದಾಳುವಾದವನು ತನ್ನ ಅನುಚರರಿಗೆ, ತನ್ನ ಆಜ್ಞೆಯ ವಿರುದ್ಧ ಎಳ್ಳಷ್ಟೂ ಅಗಳಾಡದ ಹಾಗೆ, ಪ್ರೇಮ ಕೋಪಗಳಿಂದ ವಶದಲ್ಲಿಟ್ಟುಕೊಂಡಿರಬೇಕು. ಆದರೆ ಈಗ ಸದ್ಯಕ್ಕೆ ನಿನ್ನ ಜನರು ನಡೆಸಿದ ಕೃತ್ಯದಿಂದ, ಇತಿಹಾಸದ ಫಾನೋಪಾನಿಗೆ ನಿನ್ನದೇ ಮೋಸತನದ ಕೃತ್ಯವೆಂದು ಅಜರಾಮರವಾಗಿ ಉಳಿಯುವದು. ಆದರೂ ಅಸಂಖ್ಯ ತಾರಾ ನಕ್ಷತ್ರಗಳ ಗಗನ ಮಂಡಲದಲ್ಲಿ ತನ್ನ ಕಳಂಕವನ್ನು ಮುಚ್ಚಿ ಮರೆಮಾಡಿಕೊಂಡ ಚಂದ್ರನಂತೆ, ನೀನೂ ನಿನ್ನ ಸದ್ಗುಣಗಳ ನಡತೆಯಿಂದ ಸೂರ್ಯ-ಚಂದ್ರರಿರುವವರೆಗೆ ಬೆಳಗುವೆ” ಎಂದು ಹರಕೆಯನ್ನು ನೀಡಿದರು. ಆದರೂ ನನ್ನ ಈ ಪಾಪದ ಕೃತ್ಯವು

ಎಂದಿಗೆ ತೀರುವದೋ ಎಂದು ಕಳವಳಗೊಳುತ್ತಲಿದ್ದೇನೆ" ಎನ್ನುತ್ತಿರಲು, ಎಲ್ಲರ ಕಣ್ಣುಗಳಲ್ಲಿಯೂ ಖೇದಾಶ್ರುಗಳು ತುಂಬಿ, ತಮ್ಮ ತಮ್ಮ ದೇಹಭಾನವನ್ನೇ ಮರೆತಿದ್ದರು. ಆಗ ರಾಜಕುಮಾರಿ ಲೀಲಾದೇವಿಯು "ಆ ವೀರ ಮಾತೆಯ ಹೆಸರೇನು?" ಎಂದು ಪ್ರಶ್ನಿಸಿದಳು. ಈಕೆಯ ಈ ಪ್ರಶ್ನೆಯಿಂದ ಎಲ್ಲರಿಗೂ ಆ ದೇವಿಯ ಹೆಸರನ್ನು ಕೇಳಿ ಕೃತಾರ್ಥರಾಗಬೇಕೆಂಬ ಉತ್ಸಾಹವು ಇಮ್ಮಡಿಸಿತು. ಆಗ ಶಿವಾಜಿ ಮಹಾರಾಜರೂ ಒಳ್ಳೆ ಗಂಭೀರ ಧ್ವನಿಯಿಂದ "ಯಾವಳ ಕೇವಲ ಹೆಸರನ್ನು ಕೇಳಿದ ಮಾತ್ರಕ್ಕೆ ಯವನ ಸಮ್ರಾಟರ ಕುದುರೆಗಳೂ ಕೂಡ ನೀರು ಸ್ಪರ್ಶಿಸುವದಿಲ್ಲವೋ, ಅವಳೇ ಆ ವೀರಾಂಗನೆ ಬೆಳವಡಿ ಮಲ್ಲಮ್ಮ!" ಎಂದು ವೀರೋದ್ಗಾರವನ್ನು ತೆಗೆದರು. ಆಗ ಅಲ್ಲಿ ಕುಳಿತಿದ್ದರೆಲ್ಲರಿಗೂ ಅಂಗಾಂಗಳಲ್ಲಿ ರೋಮಾಂಚವುತ್ಪನ್ನವಾಗಿ, ಯುದ್ಧಕ್ಕೆ ಹೊರಟ ವೀರರಂತೆ ಬಾಹುಗಳು ಸ್ಫುರಣವಾಗತೊಡಗಿದವು. ಆಗ ರಾಜಕುಮಾರಿಯು ಒಳಗೆ ಭಗವಾನ ಏಕನಾಥ ಲಿಂಗಜಿಯ ಸಿಂಹಾಸನದೆದುರಿಗೆ ಬಂದು, ಕರ್ಪುರವನ್ನು ಬೆಳಗಿ ಮೊಳಕಾಲೂರಿ ನಮಸ್ಕರಿಸಿ "ಹೇ ಪ್ರಭೋ ಜಗದೀಶಾ, ಈ ಕರ್ಪುರದಂತೆ ನನ್ನ ದೇಹವೂ ಜಗತ್ತಿಗೆ ಸುವಾಸನೆಯನ್ನು ಬೀರಿ, ನನ್ನ ಪ್ರಾಣ-ಪುಷ್ಪವು, ನಿನ್ನ ಚರಣಕಮಲಗಳಿಗೆ ಅರ್ಪಿತವಾಗಿ, ಈ ದೇಹವು ಧನ್ಯವಾಗಲಿ" ಎಂದು ಪ್ರಾರ್ಥಿಸಿ, ಭಾರತ-ಮಾತೆಯ ಚಿತ್ರದ ಎದುರಿಗೆ ಬಂದು ನತಮಸ್ತಕಳಾಗಿ "ಮಾತೇ ಆರ್ಯಸ್ತ್ರೀಯರಂತೆ, ನಿನಗಾಗಿಯೇ ನನ್ನ ದೇಹವು ಮೀಸಲಾಗಿದೆ" ಎಂದು ಮಂಜುಳ-ಸ್ವರದಿಂದ ಭಾರತಮಾತೆಯ ಗುಣಗಾನವನ್ನು ಹಾಡಹತ್ತಿದಳು. ಆ ವೀರೋಚಿತ ಗೀತವನ್ನು ಹೊರಗೆ ಕುಳಿತಿದ್ದವರೆಲ್ಲರೂ ಕೇಳುತ್ತ, ಎಷ್ಟು ಹೊತ್ತಿನವರೆಗೆ ಮಗ್ನರಾಗಿದ್ದರೋ!

೧೭

ರಾಜಕುಮಾರಿ ಲೀಲಾದೇವಿಗೆ ಚಿಕ್ಕ ಚಿಕ್ಕ ಮಕ್ಕಳ ಮೇಲೆ ಪ್ರೇಮ ಬಹಳ. ಅದರಂತೆಯೇ ಆ ಚಿಕ್ಕ ಮಕ್ಕಳಾದರೂ, ಆಕೆಯನ್ನು ಕಂಡಕೂಡಲೇ, ತಾಯಿಯನ್ನು ಕಳಕೊಂಡ ಕರುವಿನಂತೆ, ಆಕೆಯ ಪ್ರೇಮ ಮಧುರ ಕಥಾಮೃತ ಪಾನ ಮಾಡುವದಕ್ಕಾಗಿ ಹಂಬಲಿಸುತ್ತಿದ್ದವು. ರಾಜಕುಮಾರಿ ಲೀಲೆಯು ದಿನಾಲು ಸಂಜೆಗೆ, ಆಟವಾಡಿಸುತ್ತ, ಅವು ಚೇತನಗೊಳ್ಳುವ ಹಾಗೆ ಕಥೆಗಳಿಂದ ಹುರಿದುಂಬಿಸುತ್ತ ವಿನೋದದಿಂದ ಕಾಲ ಕಳೆಯುತ್ತಿದ್ದಳು. ಅವಳ ಕಥೆಗಳೆಂದರೆ, ಅಜ್ಜಿಯರು ಹೇಳುವ ಗುಬ್ಬಿ ಕಾಗೆಯ ಕಥೆಗಳಲ್ಲ. ಆದರೆ ಎಂತಹವು ? ಭಾರತಾಂಬೆಯ ಸೌಖ್ಯಕ್ಕಾಗಿ, ಆರ್ಯಧರ್ಮದ ಉನ್ನತಿಗಾಗಿ, ತನ್ನ ಪ್ರಾಣವನ್ನೇ ಮೀಸಲಾಗಿರಹಚ್ಚುತಕ್ಕ ವೀರಾಮೃತದ ಕಥೆಗಳು ! ನಿಜವಾಗಿಯೂ ಚಿಕ್ಕ ಮಕ್ಕಳ ಭವಿಷ್ಯವನ್ನು ರೂಪಿಸುವದು ಮಾತೆಯರ ಕೈಯಲ್ಲಿರುತ್ತದೆ. ಶಿವಾಜಿಯ ಭವಿಷ್ಯವನ್ನು ಜೀಜಾಮಾತೆಯು ರೂಪಿಸಿದ್ದರಿಂದಲೇ ಶಿವಾಜಿಯು ಛತ್ರಪತಿಯಾಗಿ ಹಿಂದೂಗಳ ಪ್ರಾಣ ಪ್ರತಿಷ್ಠಾಪಕನೆಂಬ ಬಿರುದನ್ನು ಪಡೆದು ಇಂದಿಗೂ ಅಜರಾಮರನಾದನು. ಆದ್ದರಿಂದಲೇ ಪೂರ್ವಜರು 'ತೊಟ್ಟಿಲು ತೂಗುವ ಕೈಯು ಜಗತ್ತನ್ನೇ ಆಗಳಾಡಿಸಬಲ್ಲುದು' ಎಂಬ ಗಾದೆಯ ಮಾತನ್ನು ತೆಗೆದಿದ್ದಾರೆ. ಅದರಂತೆಯೇ ನಮ್ಮ ರಾಜಕುಮಾರಿ ಲೀಲಾದೇವಿಯಾದರೂ, ಚಿಕ್ಕ ಮಕ್ಕಳ ಭವಿಷ್ಯವನ್ನು ರೂಪಿಸುವ ಪ್ರಯತ್ನದಲ್ಲಿದ್ದಾಳೆ. ಅದಕ್ಕಾಗಿಯೇ ಆ ಮಕ್ಕಳು ಆನಂದಗೊಳ್ಳುವ ಹಾಗೆ ತರ ತರದ ಆಟ ವಿನೋದಗಳಿಂದ ಮೈಯಲ್ಲಿ ಶಕ್ತಿ ತುಂಬಿಸಿ, ಕಥೆಗಳಿಂದ ಆತ್ಮ ಧೈರ್ಯವನ್ನು ನೀಡುತ್ತಿದ್ದಾಳೆ. ಧನ್ಯ ! ಭಾರತಮಾತೆಯ ಉದರದಲ್ಲಿ ಇಂತಹ ವೀರ-ರತ್ನಗಳು ಜನಿಸುವದರಿಂದಲೇ, ಜಗತ್ತಿನಲ್ಲೇ ಆರ್ಯ-ಧರ್ಮವು ಶ್ರೇಷ್ಠವಾಗಿ ಬೆಳಗುತ್ತಲಿದೆ !!

ವಾಚಕ ಬಂಧುಗಳೇ ! ಸಂಜೆಯಾಗಿದೆ ಬನ್ನಿ. ರಾಜಕುಮಾರಿ ಲೀಲಾದೇವಿಯು ತನ್ನ ಎಲ್ಲ ಚಿಕ್ಕ ಮಕ್ಕಳನ್ನೂ ಆಟವಾಡಿಸಿಕೊಂಡು, ಬೌದ್ಧಿಕಕ್ಕಾಗಿ ಸಾಲಿನಿಂದ ಕೂಡ್ರಿಸಹತ್ತಿದ್ದಾಳೆ. ಚಿಕ್ಕ ಮಕ್ಕಳೂ ಉತ್ಸಾಹದಿಂದ, ಅಮ್ಮಾ, ನಿನ್ನಿನ ಉಳಿದ ಶ್ರೀರಾಮಚಂದ್ರರ ಕಥೆಯನ್ನು ಇಂದಿಗೆ ಮುಗಿಸುವಳಾಗಮ್ಮಾ ಎಂದು ಹೇಳುತ್ತಿವೆ. ಅಕೋ! ಎಲ್ಲ ಉತ್ಸಾಹೀ ಮಕ್ಕಳಲ್ಲಿ ಒಬ್ಬನು ಮಾತ್ರ ಉದಾಸೀನನಂತಿದ್ದಾನೆ. ರಾಜಕುಮಾರಿಯು ಆ ಹುಡುಗನನ್ನು ಕಂಡಳು. ಆಕೆಯ ಹೃದಯವು ಏಕೋ ಕಳವಳಿಸಿತು. ಆಕೆಯು ಅವನ ಬಳಿ ಹೋಗಿ "ಸುಕುಮಾರಾ, ಇಷ್ಟು ಉತ್ಸಾಹೀ ಮಕ್ಕಳ ಮುಖದಲ್ಲಿ ನಿನ್ನ ಮುಖವೇಕೆ ಕಂದಿದೆ ?" ಎಂದು ದುಃಖದಿಂದ ಪ್ರಶ್ನಿಸಿದಳು. ಆಗ ಸುಕುಮಾರನು "ಅಮ್ಮಾ, ಭಗವಂತನ ಅವತಾರೀ ಪುರುಷರಾದ ಶ್ರೀರಾಮಚಂದ್ರರಿಗೂ ಕೂಡ ವನವಾಸವು ತಪ್ಪಲಿಲ್ಲವೇ ? ಆಗ ಹೊರಡುವಾಗ ಮಾತಾ ಕೌಸಲ್ಯಾದೇವಿಯರಾದರೂ, ಮಾತೃ-ಪ್ರೇಮವನ್ನು ಮರೆತು ಹೇಗೆ ಆಜ್ಞೆ ಕೊಟ್ಟಳು ?" ಮಹಾಶಯರೇ, ಕೇಳಿದಿರಾ ಚಿಕ್ಕ ಮಗುವಿನ ಭಾಷಣವನ್ನು ! ಎಲ್ಲ ಮಕ್ಕಳು ಕೇವಲ ಕಥಾಮೃತವನ್ನು ಕುಡಿಯಲು ಸಿದ್ಧರಿದ್ದರು. ಆದರೆ ಅಷ್ಟು ಮಕ್ಕಳಲ್ಲಿ, ಚಿಕ್ಕ ಕುಮಾರ ನಚಿಕೇತನಂತೆ, ಅಮೃತದ ಸಾರವನ್ನು ಹೀರಲು ಯತ್ನಿಸುತ್ತಿದ್ದನು. ಧನ್ಯ, ಸುಕುಮಾರಾ ನೀನೇ ಧನ್ಯ ! ಈ ಪ್ರಶ್ನೆಯನ್ನು ಕೇಳಿ ರಾಜಕುಮಾರಿಯೂ ಆಶ್ಚರ್ಯಚಕಿತಳಾದಳು. ಆಗ ಅವಳು ಎಲ್ಲರನ್ನೂ ಕುರಿತು "ಮಕ್ಕಳೇ, ವಿಧಿಯ ಆಟವೇ ಪ್ರಬಲವಿದೆ. ಆದರೆ ಮನುಷ್ಯನು ಕೇವಲ ದೈವವಾದಿಯಾಗಿರಬಾರದು. ಅದರಂತೆಯೇ ಪ್ರಯತ್ನವಾದಿಯೂ ಇರಬೇಕು. ಇದೇ ಪಾಠವನ್ನು ನಾವು ಕೇವಲ ಶ್ರೀರಾಮಚಂದ್ರರ ಕಥೆಯಿಂದಿಷ್ಟೇ ಅಲ್ಲ; ಆದರೆ ಪ್ರತಿಯೊಬ್ಬ ಆರ್ಯಜನೋದ್ಧಾರಕನಿಂದ ಕಲಿತಿರುವೆವು. ನಿಮ್ಮಂತೆಯೇ ಕೇವಲ ಚಿಕ್ಕ ಮಗುವಾದ ಕುಮಾರ ನಚಿಕೇತನು ತನ್ನ ದೈವದಿಂದ

ಯಮನ ಬಳಿ ಹೋಗಿ, ಪ್ರಯತ್ನದಿಂದ ಸಾಕ್ಷಾತ ಯಮನಿಂದ ಆತ್ಮೋದ್ಧಾರದ ಪಾಠವನ್ನು ಕಲಿತುಕೊಂಡನು. ಆ ಪ್ರಯತ್ನದ ಸಾಫಲ್ಯಕ್ಕಾಗಿ ಅವನಿಗೆ ರಾಜ್ಯ, ಧನ, ಸ್ತ್ರೀ, ಆಯುಸ್ಸು, ಎಲ್ಲ ತರದ ಸುಖ-ಸಂಪತ್ತಿಗಳೂ ಕೂಡ ತೃಣಸಮಾನವಾದವು. ಆದರೆ ಮಕ್ಕಳೇ ದೈವವು ಇಂದು ಲಕ್ಷಾಧಿಪತಿಯಾದವನನ್ನು ನಾಳಿಗೆ ಭಿಕ್ಷಾಧಿಪತಿ ಯನ್ನಾಗಿ ಮಾಡುತ್ತದೆ. ಅದ್ದರಿಂದಲೇ ಮನುಷ್ಯನು ಧನದ, ಸುಖದ ಆಸೆ ಮಾಡಬಾರದು, ನೋಡಿರಿ. ಕೇವಲ ಒಂದು ನಿಮಿಷವು, ಸಾಕ್ಷಾತ ವಸಿಷ್ಠ ಮಹರ್ಷಿಯೇ ಹುಡುಕಿ ತೆಗೆದ ಸುಮುಹೂರ್ತವು, ಸಿಂಹಾಸನವನ್ನೇರಿ ಸುಖದಿಂದ ರಾಜ್ಯವಾಳುವದರ ಬದಲು ಅದೇ ದೈವವು ಅದನ್ನು ದುರ್ನಿಮಿಷವನ್ನಾಗಿ ಮಾಡಿ ಸಿಂಹಾಸನದಿಂದ ದೂರ ಅಟ್ಟಿ ಅರಣ್ಯವಾಸಿಯನ್ನಾಗಿ ಮಾಡಿತು. ಆದರೆ ಅವರು ಕೇವಲ ದುರ್ದೈವವೆಂದು ಸುಮ್ಮನಾಗದೆ ಸ್ವಪ್ರಯತ್ನದಿಂದ ಎಲ್ಲ ರಾಕ್ಷಸರನ್ನು ವಧಿಸಿ ಜಗತ್ತಿನ ಭೂಭಾರವನ್ನು ಕಡಿಮೆ ಮಾಡಿದರು." ಆಗ ಸುಕುಮಾರನು ಮತ್ತೆ ನಡುವೆಯೇ ಬಾಯಿ ಹಾಕಿ "ಅಮ್ಮಾ, ನನ್ನ ಪ್ರಶ್ನೆಯ ಉತ್ತರವು ಬರಲಿಲ್ಲವಲ್ಲ!" ಎಂದು ಶಂಕಿಸಿದನು. ಆಗ ರಾಜಕುಮಾರಿಯು ಮೊದಲಿನ ಕಥೆಯ ಕಡೆಗೆ ಹೊರಳಿ "ಮಕ್ಕಳೇ, ಶ್ರೀರಾಮಚಂದ್ರರ ಅರಣ್ಯವಾಸದ ಸುದ್ದಿಯನ್ನು ಕೇಳಿ, ಅಯೋಧ್ಯಾನಿವಾಸಿಗಳೂ ಕೂಡ ದುಃಖ ಮಾಡಹತ್ತಿದರೆಂದ ಬಳಿಕ, ಕೌಸಲ್ಯಾದೇವಿಗೂ ದುಃಖವಾದದ್ದರಲ್ಲಿ ಆಶ್ಚರ್ಯವೇನು! ಆದರೆ ಶ್ರೀರಾಮಚಂದ್ರರು ತಮ್ಮ ಮಾತೆಗೆ ಸಮಾಧಾನ ಹೇಳುತ್ತಾರೆ. ಮಾತೇ, ತಂದೆಯ ಆಜ್ಞೆಯನ್ನು ಪಾಲಿಸುವದು, ಆರ್ಯ ಧರ್ಮದ ಪವಿತ್ರ ಉದ್ದೇಶವಿದ್ದು, ಅದು ಮಕ್ಕಳಾದ ನಮ್ಮ ಕರ್ತವ್ಯವಲ್ಲವೇ? ಅದೇ ಕರ್ತವ್ಯಕ್ಕಾಗಿ, ನಾನಿಂದು ಅರಣ್ಯವಾಸಿಯಾಗಹತ್ತಿದ್ದೇನೆ. ಹೇಳು. ಒಂದು ವೇಳೆ ನಿನ್ನ ಪ್ರೇಮಕ್ಕಾಗಿ ನಾನು ಸುಖೋಪಭೋಗ ನಡೆಸಿದರೆ ಧರ್ಮಬಾಹಿರನಾಗುವೆನು, ಇದು ನಿನಗೆ ಸಮ್ಮತವೇ?"

ಎನ್ನಲು ಮತ್ತೊಬ್ಬ ಬಾಲಕನು "ಎಷ್ಟು ಪವಿತ್ರ ಕಥೆಯಮ್ಮಾ! ಮುಂದೆ ಕೌಸಲ್ಯಾದೇವಿಯು ಏನೆಂದಳು." ಎಂದು ಪ್ರಶ್ನಿಸಲು, "ಚಿಕ್ಕ ಬಾಲಕರೇ, ಗಡಿಬಿಡಿ ಮಾಡಿ ನಿಮ್ಮ ಉತ್ಸಾಹವನ್ನು ಕಳಕೊಳ್ಳಬೇಡಿರಿ. ಶಾಂತ ಚಿತ್ತದಿಂದ ಕೇಳಿರಿ" ಎಂದು ಸಮಾಧಾನ ಹೇಳಿ, ರಾಜಕುಮಾರಿಯು "ಆಗ ಕೌಸಲ್ಯಾ ಮಾತೆಯು, ಅವನನ್ನು ಪ್ರೇಮಾಲಿಂಗನದಿಂದ ಅಪ್ಪಿಕೊಂಡು ಅಶ್ರುಗಳನ್ನು ಸುರಿಸುತ್ತ "ಸಾಗು ಮಗನೇ! ತಂದೆಯ ಆಜ್ಞಾ ಧರ್ಮವನ್ನು ಮೀರಲು ನಾನು ಹೇಗೆ ಉಪದೇಶಿಸಲಿ. ಧರ್ಮಕ್ಕಾಗಿ ಪ್ರಾಣವನ್ನೂ ಕೂಡ ಬಿಡುವವನಾಗು. ಯಂ ಪಾಲಯಸಿ ಧರ್ಮಂ ತ್ವಂ ಧೃತ್ಯಾ ಚ ನಿಯಮೇನ ಚ। ಸ ವೈ ರಾಘವ ಶಾರ್ದೂಲ ಧರ್ಮಸ್ತ್ವಾಮಭಿರಕ್ಷತು" ಎಂದು ಧರ್ಮಕ್ಕಾಗಿ ತನ್ನ ಮಾತೃ-ಪ್ರೇಮವನ್ನೂ ಕೂಡ ಮರೆತಳು. ಆಗ ಶ್ರೀರಾಮಚಂದ್ರರು ಆಕೆಯ ಪವಿತ್ರ ಕಣ್ಣುಗಳಿಂದುದುರುತ್ತಿರುವ ಅಶ್ರುಬಿಂದುಗಳನ್ನು ಸ್ವೀಕರಿಸಿ, ಆನಂದ ಮುಖವಾಗಿ "ಮಾತೇ, ನಿನ್ನಯ ಕೇವಲ ಈ ಎರಡು ಬಿಂದು ಅಶ್ರುಗಳನ್ನೇ, ಅಮೃತಕ್ಕೆಸಮಾನವಾಗಿರಿಸಿ, ಹದಿನಾಲ್ಕು ವರ್ಷಗಳನ್ನು ಹದಿನಾಲ್ಕು ನಿಮಿಷಗಳನ್ನಾಗಿ ಮಾಡಿ, ನಿನ್ನ ಚರಣ ಸನ್ನಿಧಿಗೆ ಬರುವೆನು" ಎಂದು ಆಕೆಯ ಆಶೀರ್ವಾದ ಪಡಕೊಂಡು ಮಾತೃ-ಪ್ರೇಮ ವಿಹೀನರಾದರು ಎಂದು ಉಪದೇಶಿಸುತ್ತಿರಲು, ಬಾಲಕವೃಂದವೆಲ್ಲವೂ ತಲ್ಲೀನವಾಗಿ ಹೋಯಿತು. ಆಗ ವಿಜಯಕುಮಾರನೂ ಅಲ್ಲಿ ಬಂದು, ಆಕೆಯ ಉಪದೇಶದ ನಂತರ, ತನಗೂ ಏನಾದರೂ ಹೇಳಬೇಕೆಂದೆನಿಸಿತು. ಆದ್ದರಿಂದ ಅವನೂ ಚಿಕ್ಕ ಮಕ್ಕಳ ಮಧ್ಯದಲ್ಲಿ ಪ್ರವೇಶಿಸಿ, "ಮಕ್ಕಳೇ, ರಾಜಕುಮಾರಿ ಲೀಲಾದೇವಿಯಿಂದ, ಧರ್ಮಪಾಠವನ್ನು ಕಲಿತ ನೀವೇ ಧನ್ಯರು. ಆದರೆ ಕೇವಲ ಕಿವಿಯಿಂದ ಕೇಳಿ, ಊಟದೊಡನೆ ಪಚನವನ್ನು ಮಾಡಬೇಡಿರಿ. ಆದ್ದರಿಂದ ನಿಮಗೆ ಉಪದೇಶಿಸಿದ ಮಾತುಗಳ ಬಗ್ಗೆ ಏನಾದರೂ

ಉಪಯೋಗ ಮಾಡಿಕೊಳ್ಳಿರಿ. ಚಿಕ್ಕ ಕುಮಾರರೇ, ಮಾನವನು ಜನಿಸಿ ಬರುವದು ಕೇವಲ ಹೊಟ್ಟೆ ಬಟ್ಟೆ ಹಾಗೂ ಧನದಾಸೆಗಾಗಿ ಅಲ್ಲ. ಕೇವಲ ಬೆಕ್ಕು ನಾಯಿಗಳನ್ನು ಸಾಕಿದರೂ ಕೂಡ, ಅವುಗಳಿಂದ ನಾವು ಒಂದು ಉಪಯೋಗವನ್ನು ಮಾಡಿಕೊಳ್ಳುತ್ತೇವೆ. ಅಷ್ಟೇ ಏಕೆ? ಮಹಾರಾಣಾ ಪ್ರತಾಪಸಿಂಹರವರು ಹತ್ತುತ್ತಿದ್ದ ಅಶ್ವವೂ ಕೂಡ, ಮಾನವನು ಮಾಡಲಾಗದ ವೀರತನವನ್ನು ಮಾಡಿ, ಕಡೆಗೆ ಅವರನ್ನು ಮೃತ್ಯು-ಮುಖದಿಂದಲೂ ಮುಕ್ತಗೊಳಿಸಿ, ತಾನು ಪ್ರಾಣವನ್ನು ಬಿಟ್ಟಿತೇ ಹೊರ್ತು, ತಾನು ಜೀವಿಸಿರುವವರೆಗೆ ಅವರನ್ನು ಯಾವ ಕಷ್ಟಕ್ಕೆ ಗುರಿಮಾಡಿಸಲಿಲ್ಲ. ಇಂತಹ ಕೇವಲ ಪಶುಗಳೇ ಇಷ್ಟು ವೀರತನದ ಕೃತ್ಯಗಳನ್ನು ಮಾಡಿದ ಬಳಿಕ, ಮಾನವರಾದ ನಮಗೇತರ ಕಷ್ಟ! ಇಂದಿಗೆ ನಾವು, ನೀವು, ಎಲ್ಲ ಆರ್ಯ ಜನರೂ ಸಾಕ್ಷಾತ ಬ್ರಹ್ಮನ ಅಂಶದವರಿದ್ದೇವೆ. ಎನ್ನಲು, ಅವರಲ್ಲಿಯ ಒಬ್ಬ ಬಾಲಕನು ಶಂಕಿಸಿ “ಇದೇನು? ನಮ್ಮನ್ನು ಹುಚ್ಚರನ್ನಾಗಿ ಕೂಡ ಮಾಡುತ್ತಿಲ್ಲವಷ್ಟೆ? ಎಲ್ಲಿ ಸೃಷ್ಟಿಕರ್ತ ಬ್ರಹ್ಮ ಹಾಗೂ ಎಲ್ಲಿ ನಾವು!” ಎಂಬ ಸಂಶಯೋದ್ಗಾರವನ್ನು ತೆಗೆದನು. ಈ ಮಾತಿನಿಂದ ವಿಜಯ-ಕುಮಾರನು ಮುಗುಳ್ನಗೆ ನಕ್ಕು “ಹೀಗೆ ದಿಗ್ಭ್ರಮೆಗೊಳ್ಳಬೇಡ ಕುಮಾರಾ ನಾನು ಹೇಳುವದನ್ನು ಮೊದಲು ಕೇಳು. ಸೃಷ್ಟಿಕರ್ತ ಬ್ರಹ್ಮನು ಜಗತ್ತೆಲ್ಲವೂ ಮೊದಲಿಗೆ ನೀರೇ ಇರುವದನ್ನು ಕಂಡು, ಜಗತ್ತನ್ನು ಹೇಗೆ ಸೃಷ್ಟಿಸಬೇಕೆಂಬ ಶಂಕೆಯು ಹುಟ್ಟಿತು. ಆದರೂ ಅವನಲ್ಲಿ ಪ್ರಜಾಸೃಷ್ಟಿಯ ಕಾರ್ಯವನ್ನು ಮಾಡಿಯೇ ತೀರುವೆನೆಂಬ ಆತ್ಮ-ವಿಶ್ವಾಸವಿತ್ತು. ಅದರ ಬಲದಿಂದಲೇ ಅವನು ಮನಸ್ಸಿನಲ್ಲಿ ‘ಏಕೋಽಹಂ ಬಹುಸ್ಯಾಂ ಪ್ರಜಾಯೇತ್’ ಎಂಬ ವಿಚಾರ ಮಾಡಿ, ತನ್ನ ಅಂಶದಿಂದಲೇ ನಮ್ಮ ನಿಮ್ಮೆಲ್ಲರನ್ನು ಸೃಷ್ಟಿಸಿದನು. ಆದ್ದರಿಂದಲೇ ನಾವೂ ನೀವೂ ಅವನ ಅಂಶದವರಿರುವೆಂದ ಬಳಿಕ ನಮಗೆ ಯಾವ ಕಾರ್ಯವು ಕಠಿಣವಾಗಬಲ್ಲದು! ಕುಮಾರರೇ, ಆದ್ದರಿಂದಲೇ ಮನು

ಷ್ಯನಿಗೆ ತನ್ನ ಧರ್ಮ ಹಾಗೂ ದೇಶಗಳು ಮುಖ್ಯವಿರುತ್ತವೆ. ಅದ ಕ್ಕಾಗಿಯೇ ಬಂದಾ ಬೈರಾಗಿಯಂತಹ ವೀರರು ತಮ್ಮ ಚಿಕ್ಕ ಮಕ್ಕ ಳನ್ನೂ ಕೂಡ ಧರ್ಮದೇವಿಗೆ ಅರ್ಪಿಸಿ ತಾವೂ ಜೀವನ್ಮುಕ್ತರಾದರು. ಅಷ್ಟೇ ಏಕೆ, ಇದೇ ಅವರಂಗಜೇಬನ ದರ್ಬಾರದಲ್ಲಿ ಶೂಲವನ್ನೇರಿದ ಗುರು ತೇಗಬಹಾದ್ದೂರರು, ತಮ್ಮ ಚಿಕ್ಕ ಕುಮಾರರಾದ ಗೋವಿಂದ ಸಿಂಹರಿಗೆ 'ಶಿರ ದಿಯಾ ಪರ ಸಾರ ನ ದಿಯಾ' ಅಂದರೆ ಹಿಂದೂ ಧರ್ಮಕ್ಕಾಗಿ ಶಿರವನ್ನು ಧಾರೆಯೆರೆದನಲ್ಲದೆ ತತ್ವವನ್ನಲ್ಲ. ಇವರಿಂದಲೇ ಸ್ಫೂರ್ತಿಗೊಂಡ ಗುರುಗೋವಿಂದಸಿಂಹರಾದರೂ ತಮ್ಮ ಮಕ್ಕಳನ್ನೂ ಕೂಡ ಬಲಿಗೊಟ್ಟರು. ಕುಮಾರರೇ, ಧನ್ಯ! ತಮ್ಮ ದೇಶ, ಧರ್ಮ ಕ್ಕಾಗಿ ಸರ್ವಸ್ವವನ್ನೂ ಧಾರೆಯೆರೆದ ಇವರೇ ಧನ್ಯರು! ಆ ಜನ ರಂತೆಯೇ ನೀವಾದರೂ ಚಿರಾಯುಗಳಾಗಿ ಬಾಳಿರಿ" ಎಂದು ಆ ಚಿಕ್ಕ ಕುಮಾರರನ್ನು ಹರಸಿದನು. ನಂತರ ಲೀಲಾದೇವಿಯೂ ಬಹಳ ರಾತ್ರಿಯಾಗಿದ್ದರಿಂದ ಅವರೆಲ್ಲರನ್ನೂ ಬೀಳ್ಕೊಟ್ಟು, ರಾಜಗೃಹಕ್ಕೆ ಬಂದಳು.

## ೧೮

ಪುಣೆಯ ರಾಯಗಡದ ದೃಶ್ಯ. ಸರ್ವ ಭಾರತ ನಿವಾಸಿಗ ಳಾದ ಆರ್ಯ ಜನರಿಗೆ ಮಾನ್ಯವಾದ ಭಗವಾ ಧ್ವಜವು ಕಂಗೊಳಿ ಸುತ್ತಲಿದೆ. ಛತ್ರಪತಿ ಶಿವಾಜಿ ಮಹಾರಾಜರು, ಮಹಾರಾಣಾ ಜೋರಾವರಸಿಂಹರ ರಾಜಧಾನಿಯಿಂದ ಅಪ್ಪಣೆ ಪಡೆಕೊಂಡು, ರಾಜ ಕುಮಾರ ರಮೇಶ, ವಿಜಯಕುಮಾರ ಹಾಗೂ ಅವನ ಪತ್ನಿ ರಾಜ ಕುಮಾರಿ ಲೀಲಾವತಿಯನ್ನು ಕರೆದುಕೊಂಡು ಬಂದಿದ್ದಾರೆ. ಇವರೆ ಲ್ಲರನ್ನು ಕಂಡು ಜೀಜಾಮಾತೆಗೂ ಆನಂದವಾಯಿತು. ಲೀಲಾ ದೇವಿಯನ್ನು ತನ್ನ ಮಗಳ ಹಾಗೆ ಕಂಡು, ಅವಳಿಗೆ ಬೇಕಾದ ಸೌಕ ರ್ಯಗಳನ್ನು ಒದಗಿಸಿಕೊಡುತ್ತಿದ್ದಳು. ಇದರಿಂದ ರಾಜಕುಮಾರಿಗೂ

ಯಾವ ತರದ ಕೊರತೆ ಇಲ್ಲದಂತಾಗಿ, ತನ್ನನ್ನು ಹಡೆದ ಮಾತೆ ಗಿಂತಲೂ ಆಕೆಗೆ ಹೃದಯಪೂರ್ವಕವಾಗಿ ವಂದಿಸುತ್ತಿದ್ದಳು. ಸಹಜವೇ! ಲೀಲಾದೇವಿಯ ಮಾತೆಯು ಸ್ವಾರ್ಥ-ಸುಖಕ್ಕಾಗಿ ತನ್ನ ಒಡಲಲ್ಲಿ ಹುಟ್ಟಿದ ಮಗಳನ್ನೇ ಮಾರಲು ಸಿದ್ಧಳಾಗಿದ್ದಳು. ಆದರೆ ಜೀಜಾಮಾತೆಯು ಸಕಲ ಆರ್ಯಜನರ ಕಲ್ಯಾಣಕ್ಕಾಗಿ, ಗೋ ಮಾತೆಯ ರಕ್ಷಣಕ್ಕಾಗಿ ಸಕಲ ವೈಭವವನ್ನೇ ತ್ಯಜಿಸಿ, ತನ್ನ ಮಗ ನಾದ ಶಿವಾಜಿಗೆ ವೀರಕಥಾವೃತ ಪ್ರಾಶನ ಮಾಡಿಸಿ, ವೀರ ಅಭಿಮ ನ್ಯುವಿನಂತೆ ಧರ್ಮಕ್ಕಾಗಿ ಪ್ರಾಣಾರ್ಪಣೆಯನ್ನು ಮಾಡಿಸಲು ಸಿದ್ಧ ಳಾಗಿದ್ದಳು. ಅಂದ ಮೇಲೆ ಕೇವಲ ಲೀಲಾದೇವಿಯೇ ಏಕೆ, ಆರ್ಯ ಧರ್ಮವನ್ನು ಪರಕೀಯರಿಂದ ಉಳಿಸಿ ಜೋಪಾನ ಮಾಡಿದರೆಂದ ಮೇಲೆ ಸಮಸ್ತ ಭರತ-ಖಂಡಕ್ಕೆ ವಂದ್ಯನೀಯರಲ್ಲವೇ! ನಿಜವಾಗಿಯೂ ಒಂದು ವೇಳೆ, ನಮ್ಮ ಆರ್ಯವರ್ತ ದೇಶದಲ್ಲಿ, ಮಹಾರಾಣಾ ಪ್ರತಾಪಸಿಂಹ, ಮಹರ್ಷಿ ವಿದ್ಯಾರಣ್ಯರು, ಹಾಗೂ ಛತ್ರಪತಿ ಶಿವಾಜಿ ಮಹಾರಾಜರು ಜನಿಸದಿದ್ದರೆ, ನಮ್ಮ ಧರ್ಮವು ಯಾವ ಸ್ಥಿತಿಯಲ್ಲಿರುತ್ತಿತ್ತೆಂಬದನ್ನು ವಾಚಕ ಬಂಧುಗಳೇ ಊಹಿಸಬೇಕು. ಆದರೆ ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಶ್ರೀರಾಮ ಚಂದ್ರರು ಇಟ್ಟ ಪಾದ ದರ್ಶನದ ಧೂಳಿಯು, ಸ್ವಾಮೀ ವಿವೇಕಾ ನಂದರಂತಹ ವಿಭೂತಿಗಳನ್ನು ಸೃಜಿಸಿ, ಜಗತ್ತಿನ ಮೂಲೆ ಮೂಲೆಗಳ ಲ್ಲಿಯೂ ಯಶೋದುಂದುಭಿಯನ್ನು ಹೊಡಿಯುವದೆಂದು ಪ್ರತಿ ಯೊಬ್ಬ ವಾಚಕನು ಅರಿತುಕೊಳ್ಳಬೇಕು.

ಒಂದು ದಿನ ರಾತ್ರಿಯ ಸಮಯ. ಅಸಂಖ್ಯ ತಾರಾ ನಕ್ಷತ್ರ ಗಳ ಗಗನ ಮಂಡಲದಲ್ಲಿ ಚಂದ್ರನು ವಿರಾಜಮಾನವಾಗಿ ಪ್ರಕಾಶಿಸು ತ್ತಿದ್ದಾನೆ. ಚಂದ್ರನ ಬೆಳಕಿನಿಂದ ಪ್ರಕೃತಿದೇವಿಯು ಸಂತುಷ್ಟಳಾಗಿ, ತನ್ನ ವೈಭವವನ್ನು ಹೊರಚೆಲ್ಲಿದ್ದಾಳೆ. ರಾಯಗಡವಾದರೂ ಶೋಭೆ ಯಿಂದ ಕಂಗೊಳಿಸುತ್ತಿದೆ. ಇಂತಹ ಪ್ರಕೃತಿದೇವಿಯ ವೈಭವಕ್ಕೆ

ಮರುಳಾದ ವಿಜಯಕುಮಾರನು ಊಟ ಮುಗಿಸಿಕೊಂಡು ದುರ್ಗದ ಮೇಲೆ ಕುಳಿತಿದ್ದಾನೆ. ಅವನ ಲಕ್ಷ್ಯವೆಲ್ಲವೂ ಧ್ವಜದೆಡೆಗೆ ಇದೆ. ಧ್ವಜವಾದರೂ ಚಂದ್ರನ ಕಾಂತಿಯಿಂದ ಶೋಭೆಗೊಂಡು, ಗಾಳಿಯ ವೇಗಕ್ಕೆ ಫಡಫಡನೆ ಹಾರುತ್ತಲಿದೆ. ಆಹಾ, ಎಂತಹ ರಮಣೀಯ ದೃಶ್ಯ ! ಆ ದೃಶ್ಯವನ್ನು ಸವಿದ ನಮ್ಮ ಪೂರ್ವಜರೇ ಧನ್ಯರು ! ! ಇಂತಹ ದೃಶ್ಯವನ್ನು ಸವಿಯುತ್ತಿದ್ದ ವಿಜಯಕುಮಾರನಿಗೆ, ಆ ಧ್ವಜದೆಡೆಗೆ ನೋಡುತ್ತಿದ್ದ ಹಾಗೆ ಭರತ ದೇಶದ ಗತ ವೈಭವವು ಕಾಣಹತ್ತಿತು. ಪೂರ್ವ ವೇದ ಕಾಲದಿಂದಲೂ, ರಾಮಾಯಣ ಮಹಾಭಾರತವನ್ನು ಹಿಡಿದುಕೊಂಡು, ಅಲ್ಲಿಯವರೆಗೆ ನಡೆದ ಒಂದೊಂದೇ ಘಟನೆಗಳು ನೆನಪಿಗೆ ಬರಹತ್ತಿದವು. ಪರಕೀಯರು ನಡೆಸಿರುವ ದಬ್ಬಾಳಿಕೆಯನ್ನು ನೆನಿಸಿ, ಅವನಿಗೆ ಬಹಳೇ ಖೇದವೆನ್ನಿಸಹತ್ತಿತು. ಆದರೆ ಯಾರ ದಬ್ಬಾಳಿಕೆಗೂ ಶರಣಾಗತರಾಗದ ‘ ಭರತ ಭೂಮಿಯ ಮಣ್ಣೇ ನನಗೆ ಹೊನ್ನು, ಆಕೆಯ ಗುಡಿಸಲೇ ನನಗೆ ರಾಜಗೃಹ !! ’ ಎಂದು ಭಾರತ ವೇದ ಪಠಣ ಮಾಡುತ್ತ ಮಡಿದ, ಸಮಸ್ತ ವೀರರ ಸ್ಮರಣೆ ಮಾಡಿದಂತೆ ಅವನಲ್ಲಿ ರೋಮಾಂಚಗಳುತ್ಪನ್ನವಾಗಹತ್ತಿದವು. ಆ ರೋಮಾಂಚದ ಭರದಲ್ಲಿಯೇ ಆತನು ಚೇತನಗೊಂಡು “ ಭಗವಾ ಲಹರಿಸು. ಇನ್ನೂ ಉನ್ನತವಾಗಿ, ಸಮಸ್ತ ಜಗತ್ತಿಗೇ ನಿನ್ನಯ ಅಮರ ಕೀರ್ತಿಯು ಕಾಣುವ ಹಾಗೆ, ಇನ್ನೂ ಜೋರಿನಿಂದ ಲಹರಿಸು. ನಿನ್ನಯ ಬಲಿದಾನದ, ತ್ಯಾಗದ ಸ್ಫೂರ್ತಿಯನ್ನು, ನಿರಭಿಮಾನಿಗಳಾಗುತ್ತಿದ್ದ ನಿನ್ನ ಭಕ್ತರಿಗೆ ದಯಪಾಲಿಸು. ಯಾವ ಆರ್ಯ ಜನರು ನಿನ್ನನ್ನು ಮರೆತಿರುವರೋ, ಅವರಿಗೆ ನಿನ್ನ ಸಲುವಾಗಿ ಮಾಡಿದ ತ್ಯಾಗವನ್ನು ವರ್ಣಿಸು. ಹಾಗೂ ನಿನ್ನ ಸಲುವಾಗಿ ಮಡಿದು ನನ್ನ ಸದ್ಗುರು ಸಿದ್ಧೇಶ್ವರನಾಥನ ಚರಣಕಮಲಗಳ ನಿಜವಾದ ಸೇವೆಯನ್ನು ಮಾಡುವ ಸೌಭಾಗ್ಯ ಸಿಗುವ ವರವನ್ನು ನೀಡು ” ಎಂದು ಪ್ರಾರ್ಥಿಸುತ್ತ ಕುಳಿತನು.

ನಂತರ ಕ್ಷಣಹೊತ್ತಿನಲ್ಲಿ ಶಿವಾಜಿ ಮಹಾರಾಜರೂ, ರಾಜಕುಮಾರ ರಮೇಶನೂ ಅಲ್ಲಿಗೆ ಆಗಮಿಸಿದರು. ಆ ಸಮಯದಲ್ಲಿ ವಿಜಯಕುಮಾರನು ಹೀಗೆ ಏಕಾಗ್ರಚಿತ್ತದಿಂದ ಧ್ಯಾನಿಸುವದನ್ನು ಕಂಡು ಆಶ್ಚರ್ಯ ಮಗ್ನರಾದರು. ಆಗ ರಾಜಕುಮಾರ ರಮೇಶನು ಮೆಲ್ಲಗೆ ' ವಿಜಯಾ ' ಎಂದು ಕೂಗಿದನು. ಇವನ ಕರೆಯುವಿಕೆಯಿಂದ, ವಿಜಯನ ಧ್ಯಾನ ಭಗ್ನವಾಗಿ " ಓ, ತಾವೂ ಬಂದಿರಾ ! " ಎಂದು ಸಣ್ಣ ಮುಖ ಮಾಡಿ ಕುಳಿತನು. ಇವನ ಮ್ಲಾನವಾದ ಮುಖವನ್ನು ಕಂಡು ಶಿವಾಜಿ ಮಹಾರಾಜರೂ ಖಿನ್ನ ಮನಸ್ಕರಾದರು. ತಮ್ಮಿಂದ ಏನಾದರೊಂದು ಅಪರಾಧದ ಘಟನೆ ಆಗಿದೆಯೇನೋ ಎಂದು ತಿಳಕೊಂಡು ಮನದಲ್ಲಿಯೇ ಪಶ್ಚಾತ್ತಾಪಪಡಹತ್ತಿದರು. ಆಗ ಶಿವಾಜಿಯವರೂ ನೊಂದ ಮುಖದಿಂದ " ವಿಜಯ-ಕುಮಾರ, ನಮ್ಮಿಂದ ಏನಾದರೂ ಅಪರಾಧವೇ ? " ಎನ್ನಲು ಇಲ್ಲವೆಂದು ಕೇವಲ ಗೋಣು ಹಾಕಿದನು" ಆಗ ಮತ್ತೆ ಮಹಾರಾಜರು ಅಷ್ಟಕ್ಕೆ ಸುಮ್ಮನೆ ಕೂಡ್ರದೆ " ಹಾಗಾದರೆ ಮುಖವೇಕೆ ಮ್ಲಾನವಾಗಿದೆ ? ವಿಜಯಾ, ಏನಿದ್ದದ್ದನ್ನು ನನ್ನ ಮುಂದೆ ತಿಳಿಸು. ನಾನು ನಿನ್ನವನು; ನೀನು ನನ್ನವನು. ಈ ಮನೆಯು ನಿನ್ನದೇ ಇರುವದು " ಎನ್ನಲು, ರಾಜಕುಮಾರ ರಮೇಶನೂ, " ನಮ್ಮೆಲ್ಲರಗಿಂತಲೂ ಹೆಚ್ಚಾಗಿ ಆದರೋಪಚಾರಗಳು ನಡೆದಿರುವ, ಈ ಅರಮನೆಯಲ್ಲಿ ನಿನಗೇತರ ಬೇಸರ " ವೆನ್ನಲು ವಿಜಯಕುಮಾರನು ಆಗ ಮುಗುಳ್ನಗೆ ನಕ್ಕು ಶಿವಾಜಿ ಮಹಾರಾಜರಿಗೆ " ಅಣ್ಣಾ, ನೀನು ಹೇಳಿದ್ದು ನಿಜ. ಸಾಕ್ಷಾತ್ ಜಗನ್ಮಾತೆ ಗಿರಿಜಾದೇವಿಯು ವಾಸಿಸುವ ಈ ನಿನ್ನ ಮಂದಿರವೆನಗೆ ಸ್ವರ್ಗ ಸಮಾನವಿದೆ, ದಿನಾಲು ಇಲ್ಲಿ ನಾನು ಆಕೆಯ ಅಮೃತವನ್ನು ಕುಡಿದು ಚೇತನಗೊಳ್ಳುತ್ತಿರುವೆ. ಆದರೆ............" ಎಂದು ಸುಮ್ಮನೆ ಕುಳಿತನು. ಆಗ ಶಿವಾಜಿ ಮಹಾರಾಜರು ಅವನ ಮಾತುಗಳಿಂದ ಅತ್ಯಾಶ್ಚರ್ಯಗೊಂಡು " ನಿನ್ನ ಮಾತಿನ ಗೂಢಾರ್ಥವೇನು ವಿಜಯ ? ಆದರೆ, ಎಂದು ಅಷ್ಟಕ್ಕೆ ನಿಂತು

ಬಿಟ್ಟೆಯಲ್ಲ ? " ಎಂದು ಅವನ ಮನದಿಚ್ಛೆಯನ್ನು ಕೇಳಿಕೊಳ್ಳಲು ಉತ್ಸುಕರಾದರು. ರಾಜ-ಕುಮಾರ ರಮೇಶನೂ ಏನನ್ನು ಹೇಳು ವನೋ ಕೇಳಬೇಕೆಂದು ಬಹಳೇ ಹಂಬಲದಿಂದ ಅವನ ಮಾತಿನ ಕಡೆಗೆ ಲಕ್ಷಗೊಟ್ಟು ಕುಳಿತನು. ಆಗ ವಿಜಯಕುಮಾರನು ಅವರ ಉತ್ಸುಕತೆಯನ್ನು ಕಂಡು ಶಾಂತ ಸ್ವರದಿಂದ ಹಾರಾಡುತ್ತಿರುವ ಭಗವಾಧ್ವಜದೆಡೆಗೆ ಬೊಟ್ಟು ಮಾಡಿ " ಬಂಧು, ನಿನ್ನ ದುರ್ಗದ ಮೇಲೆ ಕಂಗೊಳಿಸುತ್ತಿರುವ ತ್ಯಾಗ ವರ್ಣದ ಭಗವಾ ಧ್ವಜವು, ದಿನೇ ದಿನೇ ಕೆಳಗಿಳಿದು, ಭಾರತ ದೇಶದ ವೈಭವವನ್ನು ಸೂರೆಗೊ ಳಿಸಹತ್ತಿದೆ. ನಮ್ಮ ಹಿಂದೂಗಳು, ಒಕ್ಕಟ್ಟನ್ನು ಮರೆತು ಜಾತಿ ಮತ ಪಂಗಡಗಳ ಸಲುವಾಗಿ ಬಡಿದಾಡಹತ್ತಿದ್ದೇವೆ. ' ವಯಂ ಪಂಚಾ ಧಿಕಂ ಶತಮ್ ' ಎಂಬ ಧರ್ಮರಾಜನ ಆಜ್ಞೆಯನ್ನು ನಾವಿಂದಿಗೆ ಮೀರುತ್ತಲಿದ್ದೇವೆ. ಮಹಾರಾಜ, ನೀವೇ ವಿಚಾರಿಸಿರಿ. ಇದೇ ಸ್ಥಿತಿಯು ಕಡೆತನಕ ಉಳಿದರೆ, ಈ ಭರತ ದೇಶವು ನಮ್ಮದೆನ್ನುವ ಷ್ಟಾದರೂ ಧೈರ್ಯವು ಉಳಿದೀತೆ?" ಎಂದು ನುಡಿಯುತ್ತಿರಲು, ಎಲ್ಲರ ಕಣ್ಣುಗಳಲ್ಲಿಯೂ ಪ್ರೇಮಾಶ್ರುಗಳುದುರಿದವು. ಶಿವಾಜಿ ಮಹಾರಾ ಜರು, ಏಕಾಂತದಲ್ಲಿ ಕುಳಿತು ಈ ತರದ ಉಚ್ಚ ವಿಚಾರಗಳಿಂದ ಮಗ್ನ ನಾಗಿ ದುಃಖಿಸುತ್ತಿರುವ ವಿಜಯಕುಮಾರನನ್ನು ಕಂಡು, ಆನಂದದಿಂದ ಅವನ ಮೇಲೆ ಕೈಯಾಡಿಸುತ್ತ " ವಿಜಯ, ಪ್ರತಿಯೊಬ್ಬ ಮಾನವನು ತನ್ನ ದೇಶ, ಧರ್ಮ, ಇವುಗಳ ಬಗ್ಗೆ ನಿನ್ನಂತೆ ವಿಚಾರ ಮಾಡಿ, ತನ್ನ ಪೂರ್ವಜರ ಹೆಜ್ಜೆಗಳಿಗನುಸರಿಸಿದರೆ, ಭಾರತ ದೇಶದ ವೈಭವವು ಕಣ್ಣು ಮುಚ್ಚಿ ತೆರೆಯುವದರೊಳಗಾಗಿ ಉಚ್ಚ ಶಿಖರಕ್ಕೇರುವದು. ಮಹಾಲಕ್ಷ್ಮೀ ದೇವಿಯು ವಿದ್ಯಾರಣ್ಯ ಮಹರ್ಷಿಗಳ ತಪಸ್ಸಿನಿಂದ ಮೆಚ್ಚಿ ಬಂಗಾರದ ಮಳೆ ಸುರಿಸಿದ, ನಮ್ಮ ಭಾರತ ದೇಶ ! ಇಡೀ ವಿಶ್ವವನ್ನೇ ಗೆಲ್ಲುತ್ತ ಬಂದ, ಸಿಕಂದರ ಬಾದಷಹನನ್ನು, ' ಸಮ್ರಾಟ ಚಂದ್ರಗುಪ್ತನು, ಅಟ್ಟಿಸಿದ ದೇಶ ನಮ್ಮ ವಿಶ್ವ ಜಿಂಕ್ಯ ಭಾರತ ದೇಶ !

ದಿನಕ್ಕೊಂದು ತರದ ಕಷ್ಟಗಳನ್ನು ಇದೇ ಔರಂಗಜೇಬ ಬಾದಷಹನ ದರ್ಬಾರದಲ್ಲಿ ಸಹಿಸಿ, ಹಿಂದೂ ಧರ್ಮದ ಮಹತ್ವವನ್ನು ತೋರಿಸಿ ಕೊಟ್ಟ 'ವೀರ ಬಂದಾ ಬೈರಾಗಿ'ಗೆ ಜನ್ಮ ಕೊಟ್ಟ ದೇಶವೆಂದರೆ ನಮ್ಮ ಭಾರತ ದೇಶ! ಅಷ್ಟೇ ಏಕೆ, ಯವನ ಸಮ್ರಾಟರ ಕುದುರೆ ಗಳಿಗೂ ಕೂಡ ಅಂಜಿಕೆಯನ್ನಿಟ್ಟು, ಕಾಬೂಲದವರೆಗೆ ಭಗವಾ ಧ್ವಜ ವನ್ನು ಹಾರಿಸಿ ಬಂದ 'ನಲವಾ ಹರಿಸಿಂಗ'ನ ದೇಶ, ಇದೇ ಭಾಗತ ದೇಶ! ವಿಜಯಾ, ಇದೇ ತರದ ನಮ್ಮ ಭಾರತ ದೇಶದ ಮಹಿಮೆ ಯನ್ನು ವರ್ಣಿಸಬೇಕಾದರೆ ರಾಮಾಯಣ, ಮಹಾಭಾರತಗಳಿಗೂ ಮೀರಬಹುದು." ಆಗ ರಾಜಕುಮಾರ ರಮೇಶನು "ತಾವೆನ್ನುವದು ನಿಜವಿದೆ. ನಮ್ಮ ದೇಶದಲ್ಲಿ ಕೇವಲ ಹಿಡಿ ಮಣ್ಣಿನಷ್ಟಿರುವ ಯವ ನರು, ತಮ್ಮ ಪ್ರಭುತ್ವವನ್ನು ಸ್ಥಾಪಿಸಿ ನಮ್ಮ ಮೇಲೆ ಹಕ್ಕನ್ನು ನಡೆ ಸಹತ್ತಿದ್ದಾರೆ. ಆದರೆ ನ್ಯಾಯ ಧರ್ಮದಿಂದ ಎಲ್ಲ ಹಿಂದೂ-ಮುಸ ಲ್ಮಾನರನ್ನು ಸಮ ದೃಷ್ಟಿಯಿಂದ ನಡೆಸಿಕೊಂಡಿದ್ದರೆ, ಇಷ್ಟೊಂದು ವೈರತ್ವದಿಂದ ನಡೆದುಕೊಳ್ಳುವ ಪ್ರಸಂಗವು ಬರುತ್ತಿರಲಿಲ್ಲ. ಆದರೆ ನಮ್ಮ ಹಿಂದೂ ಜನರ ಮೇಲೆ ನಡೆಸಿದ ಜುಲುಮೆ, ಅನ್ಯಾಯ, ಅತ್ಯಾ ಚಾರಗಳು ನೋಡಲಿಕ್ಕೂ ಕೂಡ ತೀರ ಅಸಹ್ಯವಾಗಿವೆ. ಈ ಅವ ರಂಗಜೇಬನಿಗಿಂತಲೂ, ಅಕಬರ ಬಾದಷಹನು ಎಷ್ಟೋ ಚೆನ್ನಾಗಿದ್ದ ನೆಂದು ನಮ್ಮ ಜನರು ಆಡಿಕೊಳ್ಳುತ್ತಾರೆ. ಹಾಗೂ ಆತನು ಹಿಂದೂ ಅಬಲೆಯರಿಗೆ ಮಾನವನ್ನೀಯುತ್ತಿದ್ದನೆಂದು, ನನ್ನ ಜನಕನಿಂದ ಕೇಳಿದ್ದೇನೆ" ಎನ್ನಲು, ವಿಜಯಕುಮಾರನು ಕಡುಕೋಪದಿಂದ, ಕೆಂಗಣ್ಣುಗಳನ್ನು ಮಾಡಿದನು. ಆಗಿನ ಅವನ ದೃಶ್ಯದಿಂದ, ರಾಜ ಕುಮಾರ ರಮೇಶನಿಂದ ಅಕಬರನ ಹೆಸರನ್ನು ಕೇಳಿದೊಡನೆ ರುದ್ರನೇ ಅವನ ಹೃದಯದಲ್ಲಿ ಪ್ರವೇಶಿಸಿದನೋ ಎನ್ನುವಂತಿತ್ತು. ಆದರೂ ವಿಚಾರವಂತನಾದ, ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟು ನಂತರ ಹಳ

ಹಳಿಸತಕ್ಕ ಈ ವಿಜಯಕುಮಾರನು ಇದ್ದಿದ್ದಿಲ್ಲ. ಸಮಯಕ್ಕೆ ತಕ್ಕಂತೆ ವರ್ತಿಸುವ ಬುದ್ಧಿಯು ಆ ವೀರನದಾಗಿತ್ತು. ಅಂತಲೇ ಶಾಂತನಾಗಿ ರಾಜಕುಮಾರನಿಗೆ “ ರಮೇಶಾ, ಅಕಬರ ಬಾದಷಹನು ಹಿಂದೂ ಸ್ತ್ರೀಯರಿಗೆ ಸನ್ಮಾನ ಮಾಡುತ್ತಿದ್ದನೆಂದು, ನಿನ್ನ ತಂದೆಯು ಹೇಳಿ ದನೇ ? ನಿಜ, ಅಂತಲೇ ಅವನ ವಂಶಸ್ಥನಾದ ಈ ಅವರಂಗಜೇಬ ನಿಗೆ ತನ್ನ ಮಗಳನ್ನು ಕೊಡಲು ಸಿದ್ಧನಾಗಿದ್ದನು. ” ಎನ್ನಲು ಶಿವಾಜಿ ಮಹಾರಾಜರು ಬೇಕೆಂತಲೇ, “ ಹಾಗಾದರೆ ಅಕಬರನು ಆ ತರದ ಸ್ವಭಾವದವನಿದ್ದಿಲ್ಲವೇ ? ನನಗೊಂದು ತಿಳಿಯದು ” ಎಂದು ನುಡಿ ದರು. ಆಗ ವಿಜಯಕುಮಾರನು ಮುಗುಳ್ನಗೆಯಿಂದ “ಮಹಾರಾಜ, ತಮ್ಮ ತಾಯಿಯಿಂದಲೇ ಎಲ್ಲ ಪಾಠವನ್ನು ಕಲಿತು ತಾವು, ನನ್ನ ಮುಖಾಂತರ ಕೇಳಬೇಕೆಂದು ಬಯಸುವಿರಾ ? ” ರಾಜಕುಮಾರ ರಮೇಶನು “ ವಿಜಯಾ, ನನಗಾದರೂ ತಿಳಿಸಬಾರದೇ ? ” ಎಂದು ಅವನನ್ನು ಪ್ರಶ್ನಿಸಿದನು. ಆಗ ವಿಜಯಕುಮಾರನು “ ನನಗಿಂತಲೂ ಶಿವಾಜಿ ಮಹಾರಾಜರಿಂದಲೇ ಕೇಳುವದು ಲೇಸೆ”ಂದು ಅವರನ್ನು ಒತ್ತಾಯಪಡಿಸಹತ್ತಿದನು. ಆದರೆ ಶಿವಾಜಿ ಮಹಾರಾಜರು ನಿರಾ ಕರಿಸಿ “ ನೀನೇ ಅದರ ಪ್ರಸ್ತಾಪನೆಯನ್ನು ತೆಗೆದದ್ದರಿಂದ, ನಿನ್ನಿಂದಲೇ ನಾವು ತಿಳಕೊಳ್ಳುವದು ಲೇಸು. ಅದು ನಿನ್ನಿಂದಲೇ ಉತ್ತೇಜನವು ದೊರೆಯುವದು ” ಎಂದು ಅವನ ಮೇಲೆಯೇ ಭಾರವನ್ನು ಹೊರಿಸಿ ಬಿಟ್ಟರು. ಆಗ ವಿಜಯಕುಮಾರನು ಗಂಭೀರ ಧ್ವನಿಯಿಂದ ರಾಜ ಕುಮಾರನಿಗೆ “ ರಮೇಶ, ಈ ಅವರಂಗಜೇಬ ಬಾದಷಹನು ನಿಷ್ಕಪ ಟತನದ ರೀತಿಯಿಂದ ನಮ್ಮ ಸ್ತ್ರೀಯರ ಮಾನಭಂಗ ಮಾಡಿದರೆ, ಅಕಬರಬಾದಷಹನು ಗೋಮುಖ ವ್ಯಾಘ್ರೀ ವೇಷದ ಕಪಟಧಾರಿ ಯಾಗಿದ್ದನು. ನಿಜವಾಗಿಯೂ, ಅವನು ಮಾಡುತ್ತಿದ್ದ ಸ್ತ್ರೀಯರ ಮಾನಹರಣದ ಇತಿಹಾಸವನ್ನು ಕೇಳಿದರೆ ಮೈಯು ಕಾಯುತ್ತದೆ.

ವರ್ಷಕ್ಕೊಂದು ಸಲ ಉರುಸು ಮಾಡಿ ಕೇವಲ ಹೆಂಗಸರೇ ಅಂಗಡಿಗಳನ್ನಿಟ್ಟು ಮಾರುವ ‘ ಮೀನಾಬಝಾರ ’ ಎಂಬ ಪೇಟೆಯನ್ನು ಅದರಲ್ಲಿ ಮಾಡಿಸಿದನು. ಆಗ ಈತನೂ ಸ್ತ್ರೀ ವೇಷ ಧರಿಸಿ, ಆ ಪೇಟೆಯಲ್ಲಿ ಒಳಹೊಕ್ಕು ಸುಂದರವಾದ ಹಿಂದೂ ಸ್ತ್ರೀಯರನ್ನು ಧನದಾಸೆ ಹಚ್ಚಿ, ಕೆಲವರನ್ನು ಜುಲುಮೆಯಿಂದ ವಶಮಾಡಿಕೊಳ್ಳುತ್ತಿದ್ದನು. ಈ ತರದ ಒಂದು ಉರುಸಿನಲ್ಲಿ, ಭಾರತಮಾತೆಯ ಮುಕುಟ ಮಣಿಯಾದ ‘ ಮಹಾರಾಣಾ ಪ್ರತಾಪಸಿಂಹ’ರ ತಮ್ಮ, ಶಕ್ತಿಸಿಂಹನ ಮಗಳಾದ ‘ ಜೋಧಬಾಯಿ’ಯು ಹೋಗಿದ್ದಳು. ಈ ಜೋಧಬಾಯಿಯು ಮಹಾ ಪತಿವ್ರತೆಯಳಿದ್ದಂತೆ ವಿಪತ್ತಿಗೆ ಅಂಜದ ವೀರಳೂ ಆಗಿದ್ದಳು. ಅಂತೆಯೇ ಆಕೆಯ ಪಾಲಖಿಯನ್ನು ಹೊತ್ತುಕೊಂಡು ಬಂದ ಬೋವಿಗಳನ್ನು ಮರೆ ಮೋಸದಿಂದ ಕಳಿಸಿ, ಮುಚ್ಚಂಜೆಯ ಹೊತ್ತಿನಲ್ಲಿ ಆಕೆಯ ಪತಿವ್ರತೆಯರನ್ನು ನಾಶಗೊಳಿಸಲು ಬಂದ ಸ್ತ್ರೀ-ವೇಷಧಾರಿ ಅಕಬರ ಬಾದಷಹನನ್ನು, ತನ್ನಲ್ಲಿರುವ ಬರ್ಚಿಯನ್ನು ಹಿರಿದು, ಆತನನ್ನು ತನ್ನ ಚರಣಗಳ ಮೇಲೆ ಬೀಳುವಂತೆ ಮಾಡಿದಳು. ಆದರೆ ಇಂತಹ ನೀಚ ಕೃತ್ಯವನ್ನು ಜನತೆಗೆ ತಿಳಿಯಬಾರದೆಂದು ಅವನ ಮಂತ್ರಿಗಳಲ್ಲೊಬ್ಬ ಆಬುಲ್ ಫಜಲ್ ಫೈಜಿಯು ‘ ತನ್ನ ರಾಜ್ಯದಾಡಳಿತೆಯನ್ನು ಸ್ತ್ರೀಯರ ಮುಖಾಂತರ ಕೇಳಬೇಕೆಂದು ಇಚ್ಛಿಸಿ, ಉರುಸಿನಲ್ಲಿ ಆ ತರದ ಪೇಟೆಯನ್ನು ಮಾಡಿ ತಾನು ಸ್ತ್ರೀವೇಷಧಾರಿಯಾಗಿ ಹೋಗುತ್ತಿದ್ದನೆ’ಂದು ಬರೆಯಲ್ಪಟ್ಟಿದೆ. ಇದೇ ಅಲ್ಲವೇ ಅಕಬರ ಬಾದಷಹನು ಹಿಂದೂ ಜನರ ಮೇಲೆ ಇಟ್ಟ ಪ್ರೇಮತನ! ಅಕಬರ ಬಾದಷಹನ ದಯಾಳುತನ! ಆಹಾ ಧನ್ಯವಾದದ್ದು!” ಎಂದು ಹೀಯಾಳಿಸತೊಡಗಿದನು. ಆಗ ಶಿವಾಜಿ ಮಹಾರಾಜರು “ ವಿಜಯಾ, ಹಾಗೆ ಹೀಯಾಳಿಸಬೇಡ. ನಾವೇ ಮೂರ್ಖರಿದ್ದ ಬಳಿಕ, ಅವರಿಗೆ ಹೆಸರಿಡುವದಾದರೂ ಹೇಗೆ? ನೀನೇ ವಿಚಾರ ಮಾಡು. ಕೇವಲ ಊಟಕ್ಕೆ ಬರಲಿಲ್ಲವೆಂದು ತಿಳಿದ ರಾಜಾಮಾನಸಿಂಹನು, ಹಳದೀ

ಘಾಟದ ಸಮರದಲ್ಲಿ ತಾನೇ ಮುಂದಾಳಾಗಿ ಮಹಾರಾಣಾ ಪ್ರತಾಪ ಸಿಂಹರಿಗೆ ಇದಿರಾದನಲ್ಲವೇ ? ಅದೇ ಆತನಿಗೆ ತನ್ನ ವಂಶದ, ದೇಶದ ಚಿಂತನೆಯಿರುತ್ತಿದ್ದರೆ, ಆ ಸಿಂಹದ ಪರಿಸ್ಥಿತಿಯು ಹಾಗೇಕಾಗುತ್ತಿತ್ತು ? ಆದರೆ ನಾವು ನೆನಪಿನಲ್ಲಿಡಬೇಕಾದ ಮಹತ್ವದ ಸಂಗತಿಯೆಂದರೆ, ಮಹಾರಾಣಾ ಪ್ರತಾಪಸಿಂಹರಿಂದ ಅಕಬರ ಬಾದಷಹನು ವಿಜಯ ಹೊಂದುತ್ತಿದ್ದರೂ ಆತನ ಮನದ ದುಗುಡವು ಕಡಿಮೆಯಾಗಿದ್ದಿಲ್ಲ. ಕೇವಲ ಜಾಗೃತಾವಸ್ಥೆಯಲ್ಲಿಯೇ ಅಲ್ಲ, ಸ್ವಪ್ನಾವಸ್ಥೆಯಲ್ಲಿಯೂ ಆ ವೀರನ ಭಾಲೆಯು, ಸಿಂಹವು ಎದೆಯನ್ನು ಸೀಳಿದಂತಾಗುತ್ತಿತ್ತು. ರಾಜಾ ಮಾನಸಿಂಹನದೂ ಕೂಡ ಇದೇ ಸ್ಥಿತಿ. ಆದರೆ ರಾಜಾ ಮಾನಸಿಂಹನ ಅರಮನೆಯ ವೈಭವಕಿಂತಲೂ, ಮಹಾರಾಣಾ ಪ್ರತಾಪ ಸಿಂಹರ ಅರಣ್ಯದ ಗುಹೆಯ ಸುಖವು ಚೆನ್ನಾಗಿತ್ತು. ಆ ತರದ ಯಾರಿಗೂ ತಲೆಬಾಗಿಸದ ಸ್ವಾತಂತ್ರ್ಯವೇ ಆವನಿಗೆ ಬೇಕಾಗಿತ್ತು. ರಾಜಾ ಮಾನಸಿಂಹನ ಅರಮನೆಯು ಅರಮನೆಯಲ್ಲ; ಅದೊಂದು ಮಸಣವಕಿಂತಲೂ ಕೀಳೆಂದರೆ ನಡೆಯಬಹುದು. ಏಕೆಂದರೆ ಸ್ಮಶಾನಾಧಿಪತಿ ಭಗವಾನ ಶಂಕರನು, ಅಲ್ಲಿ ಭೂತಗಳೊಡನೆ ಪ್ರೇಮದಿಂದ ವಾಸಿಸುತ್ತಿದ್ದು, ರಾಷ್ಟ್ರಕ್ಕೆ ಕಲ್ಯಾಣವನ್ನು ಬಯಸುತ್ತ, 'ಶಿವ'ನೆಂಬ ಬಿರುದನ್ನು ಪಡೆದಿದ್ದಾನೆ. ಆದ್ದರಿಂದ ಸ್ವಾತಂತ್ರ್ಯ ಪ್ರೇಮಿಗಳಿಗೆ, ಅದೇ ಸ್ವಾತಂತ್ರ್ಯವು ಪ್ರೇಮವೆನಿಸುವದು. ಅವರು ಅದಕ್ಕೇ ಬೆಲೆಯನ್ನು ಕೊಡುವರು." "ನಮ್ಮ ಪೂರ್ವಜರ ಈ ತರದ ಅನುಭವದ ಪಾಠಗಳನ್ನು ಕಲಿತುಕೊಂಡು ನಮ್ಮ ಜನರು ಇನ್ನಾದರೂ ಎಚ್ಚರಾಗಬಹುದೇ ?" ಎಂದು ರಾಜಕುಮಾರನು ಪ್ರಶ್ನಿಸಲು, ವಿಜಯಕುಮಾರನು "ಅದು ಹೇಗೆ ಹೇಳಲು ಸಾಧ್ಯ ? ಜನರು ಯಾವಾಗ ತನ್ನ ನೆರೆಹೊರೆಯುವನ ಸುಖ–ದುಃಖಗಳೇ ತನ್ನವೆಂದು ತಿಳಕೊಳ್ಳುವನೋ, ಆಗಲೇ ಭರತದೇಶದಲ್ಲಿ ಹೊನ್ನಿನ ಮಳೆಯು ಮತ್ತೆ ಸುರಿಯಲು

ಸಾಧ್ಯ. ಈ ತರದ ವಿಚಾರವನ್ನು ತಿಳಕೊಳ್ಳುವದಕ್ಕಾಗಿ, ನಮ್ಮ ಜನರು ಮೊದಲು ಧರ್ಮದ ಮಹತ್ವವನ್ನು ಅರಿತುಕೊಳ್ಳಬೇಕು. ‘ ಧರ್ಮೇಣಧಾರ್ಯತೆ ಪೃಥ್ವಿ, ಧರ್ಮೇಣ ತಪತೆರವಿಃ । ಧರ್ಮೇಣ ವಹತಿವಾಯು, ಸರ್ವಂ ಧರ್ಮೆ ಪ್ರತಿಷ್ಠಿತಮ್ ’ ಎಂದು ಭಗವಾನ ನಾರಾಯಣರು ನುಡಿದ ವಾಕ್ಯದ ಮಹತ್ವವನ್ನು ನಾವು ಮೊದಲು ಅರಿತುಕೊಳ್ಳಬೇಕು. ಮಾತಾ ರುದ್ರಾಣಾಂ ದುಹಿತಾ ವಸೂನಾಂ । ಸ್ವಸಾದಿತ್ಯಾನಾಂ, ಅಮೃತಸ್ಯ ನಾಭಿಃ । ಎಂದು ಋಗ್ವೇದದಲ್ಲಿ ಬೋಧಿಸಿದ ಗೋಮಾತೆಯ ಮಹತ್ವವನ್ನು ನಾವು ಅರಿತುಕೊಂಡರೆ ಮಾತ್ರ ಭಾರತದ ಕಲ್ಯಾಣವಾಗುವದು. ” ಈ ಮಾತಿಗೆ ಶಿವಾಜಿ ಮಹಾರಾಜರು ಅನುಮೋದಿಸುತ್ತ “ ನಮ್ಮ ಜನರು ಉಕ್ಕು ಇದ್ದ ಹಾಗೆ. ಅವರು ಅನ್ಯಾಯಕ್ಕೆ ಒಮ್ಮೆಲೇ ಅವಿಚಾರದಿಂದ ಸಂತಾಪ ಗೊಳ್ಳುವವರಲ್ಲ. ಮತ್ತು ಒಮ್ಮೆ ಸಂತಪ್ತರಾದ ಬಳಿಕ ಅನ್ಯಾಯಕ್ಕೆ ಪ್ರತೀಕಾರ ಮಾಡಿ, ಅವರನ್ನು ನಾಶಗೊಳಿಸದೆ ಬಿಡುವವರಲ್ಲ ” ಎನ್ನಲು, ರಾಜಕುಮಾರ ರಮೇಶನು “ ಹಾಗಾದರೆ ಈಗ ಇಷ್ಟು ಅತ್ಯಾಚಾರ, ಅನಾಚಾರಗಳು ನಡೆದಿರಲು, ಇನ್ನೂ ನಮ್ಮ ಜನರಿಗೆ ಬಿಸಿ ತಾಗಿಲ್ಲವೇ ? ಅಂದ ಮೇಲೆ ಇಂಥ ಜನರಿದ್ದು ಫಲವೇನು ? ನಮ್ಮ ಮಾತೆಯು ಇಷ್ಟು ಮಕ್ಕಳನ್ನು ಹಡೆಯುವದಕ್ಕಿಂತಲೂ, ತನ್ನ ಸುಖ ದುಃಖಗಳಲ್ಲಿ ಸಮಪಾಲರಾಗತಕ್ಕ ಕೇವಲ ಸದ್ಗುಣಿಗಳಿಗೇ ಜನ್ಮ ಕೊಟ್ಟರೆ, ಆಕೆಯು ತೇಜವಾದರೂ ಬೆಳಗೀತು ” “ ರಮೇಶ, ಹೀಗೆ ಕ್ಷೋಭೆಗೊಳ್ಳಬೇಡ. ಜಗತ್ತಿನಲ್ಲಿ ದುಷ್ಟರಿದ್ದಾಗಲೇ, ಶಿಷ್ಟ ರಿಂದ ಕೀರ್ತಿಯು ಹೆಚ್ಚುವದು. ರಾವಣನಿದ್ದನೆಂತಲೇ ಶ್ರೀರಾಮ ಚಂದ್ರರು ಬೆಳಗಿದರು. ಕೌರವರಿಂದಲೇ ಪಾಂಡವರು ಆದರ್ಶರಾ ದರು. ಬೇಕಾದರೆ ಕೀರ್ತಿಶಾಲಿ ಪಾಂಡವರ ಉದಾಹರಣೆಯನ್ನು ತೆಗೆದುಕೊಳ್ಳು. ಕೌರವರು ತಮ್ಮ ಕಕ್ಕನ ಮಕ್ಕಳೇ ಆಗಿದ್ದ ಪಾಂಡ ವರನ್ನು ಚಿಕ್ಕಂದಿನಿಂದಲೂ ಎಷ್ಟು ಪೀಡಿಸಲಿಲ್ಲ ! ಕೌರವರ ತುಂಬಿದ

ಸಭೆಯಲ್ಲಿ, ರಜಸ್ವಲೆಯಾಗಿದ್ದ ಏಕ ವಸ್ತ್ರವನ್ನುಂಟುಕೊಂಡು ದ್ರೌಪದಿ ಮಾತೆಯನ್ನು ಎಷ್ಟು ವಿಧದಿಂದ ಅವಮಾನಗೊಳಿಸಲಿಲ್ಲ! ಇಂತಹ ನೀಚ ಕೃತ್ಯಗಳನ್ನು ಸಹಿಸುವದಕ್ಕೆ ಅವರೇನು ದುರ್ಬಲರಿದ್ದರೇ? ಸ್ವತಃ ಸಾಕ್ಷಾತ ಶಂಕರನನ್ನು ತನ್ನ ವೀರ ವೃತ್ತಿಯಿಂದ ಪ್ರಸನ್ನಗೊಳಿಸಿ, ಅವರಿಂದ ಗಾಂಡೀವ ಧನುಸ್ಸನ್ನೇ ಪಡೆದ ವೀರ ಧನಂಜಯುನಿಗೆ, ದುಃಶಾಸನ ಶಾಸನವನ್ನು ಮಾಡಲು ತಡವಿತ್ತೇನು? ಮೇಲಾಗಿ ಭಗವಾನ ವಿಷ್ಣುನಾರಾಯಣನ ಅವತಾರೀ ಪುರುಷರಾದ ಶ್ರೀಕೃಷ್ಣ ಪರಮಾತ್ಮರೇ ಅವರ ಸಹಾಯಕರು. ಅಂತಹ ಜಗತ್ಪಾಲಕನ ಪ್ರೇಮವೇ ಅವರನ್ನುದ್ಧರಿಸುತ್ತಿರೆಂದ ಮೇಲೆ ಯಾವ ತರದ ಅಶಕ್ಯತೆಯಿತ್ತು? ಅವರು ಮಾಡಿದ ಅನ್ಯಾಯಕ್ಕಿಂತಲೂ, ಈ ಹಿಂಸೆಯು ಹೆಚ್ಚಿನದಲ್ಲ. ಯಾವಾಗ ಹಿಂಸಾಗಾರನ ಹಿಂಸೆಯ ಪಾಪದ ಕೊಡವು ತುಂಬುವದೋ, ಆಗ ಅದು ತಾನಾಗಿ ಉರುಳಲೇಬೇಕು.

ಈ ತರದಿಂದ ಈ ಮೂವರ ವೀರೋಚಿತವಾದ ಮಾತುಗಳು ನಡೆಯುತ್ತಿರಲು ಮಧ್ಯರಾತ್ರಿಯಾಗುತ್ತ ಬಂದಿತು. ಆದರೂ ಅದರ ಪರಿವೆಯು ಯಾರಿಗೂ ಇದ್ದಿಲ್ಲ. ಆದರೆ ಅಂಥ ಸಮಯದಲ್ಲಿ ದುರ್ಗದ ಪಕ್ಕದಲ್ಲಿದ್ದ ವಿಶ್ವತಾರಿಕೆ ದುರ್ಗಾದೇವಿಯ ಮಂದಿರದಲ್ಲಿ, ದೇವಿಯ 'ದುಷ್ಟ ಮಾರಿಕೆ! ಶಿಷ್ಟ ತಾರಿಕೆ! ಭುವನ ಪಾಲಿಕೆ' ಎಂದು ಗುಣಗಾನ ಮಾಡುತ್ತಿರುವ ಮಂಜುಳವಾದ ಗೀತವು ಕೇಳಬರಹತ್ತಿತು. ಆ ಗಾನದ ಭರದಲ್ಲಿಯೇ ಎಲ್ಲರೂ ಮಗ್ನರಾದರು. ನಂತರ ಕ್ಷಣ ಹೊತ್ತಿನಲ್ಲಿ, ಆ ಗಾನದೇವಿಯು, ಮಾತೆಯ ಪ್ರಸಾದವನ್ನು ಅಲ್ಲಿಗೆ ತಂದಳು. ಆ ಗಾಯನದೇವಿಯು ಮತ್ತಾರೂ ಆಗಿರದೆ, ವಿಜಯಕುಮಾರನ ಪತ್ನಿ ರಾಜಕುಮಾರಿ ಲೀಲಾದೇವಿಯೇ ಇದ್ದಳೆಂದು ವಾಚಕರು ತರ್ಕಿಸಿರಬಹುದು. ಆಕೆಯನ್ನು ಕಂಡು ಎಲ್ಲರ ಮುಖ-ಕಮಲಗಳು ಅರಳಿದವು. ಆಗ ಶಿವಾಜಿ ಮಹಾರಾಜರು ಆನಂದದಿಂದ

ಆಕೆಯ ಪ್ರಸಾದವನ್ನು ಸ್ವೀಕರಿಸಿ, “ಅಮ್ಮಾ, ಮಗಳೇ, ಸಮಯ ಒದಗಿದಾಗ್ಗೆ ಯಾವ ದೇವಿಯು ಪ್ರಸಾದವನ್ನು ನೀನು ಹಂಚಿದೆಯೋ, ಆ ವೀರಮಾತೆಯಂತೆ ನೀನೂ ಆಚರಿಸು. ಸಮಯದಲ್ಲಿ ಸಾವಿತ್ರೀ ಮಾತೆಯಂತೆ, ಪತೀ ಧರ್ಮಕ್ಕಾಗಿ ಮೃತ್ಯುದೇವನನ್ನೂ ಅನುಸರಿಸು. ಪ್ರಸಂಗ ಬಂದಾಗ್ಗೆ ಸೀತಾ ಮಾತೆಯಂತೆ ಕಠಿಣ ಪ್ರಸಂಗದಲ್ಲಿ ಎದೆಗೊಟ್ಟು, ಆ ರತ್ನಗಳಂತೆ ನೀನೂ ಶೋಭಿಸು” ಎಂದು ಆಕೆಯ ಮೇಲೆ ಪ್ರೇಮದಿಂದ ಕೈಯನ್ನಾಡಿಸಿ ಬೀಳ್ಕೊಟ್ಟರು. ನಂತರ ಅವರೂ ಎಲ್ಲರು ಎದ್ದು, ಭಾರತಮಾತೆಯ ಸ್ತೋತ್ರವನ್ನು ಮಾಡಿ, ಭಗವಾ ಧ್ವಜವೆಡೆಗೆ ಬಂದು “ಹೇ ಭಗವಾ, ಸೂರ್ಯ ಚಂದ್ರರಿರುವವರೆಗೂ ನಿನ್ನ ಪ್ರಕಾಶವು ಜಗತ್ತಿಗೆ ಬೀರಲಿ. ನಿನ್ನಯ ಪವಿತ್ರವಾದ ಅಜರಾಮರ ಗಾನವನ್ನು, ವೇದವಂಶೀ ಆರ್ಯರು ಚಿರಕಾಲಗಳವರೆಗೆ ಹಾಡುತ್ತಿರಲಿ” ಎಂದು ಮೊಳಕಾಲೂರಿ ನಮಸ್ಕರಿಸಿದರು. ಆಗ ವಿಜಯಕುಮಾರನು ಆ ಧ್ವಜವನ್ನು ಮತ್ತೆ ಮೇಲಕ್ಕೇರಿಸಿ, ಭಾರತ ಮಾತೆಯ ಕೀರ್ತಿಗಾಗಿ ಮಡಿದ ಹುತಾತ್ಮರ ಆತ್ಮಕ್ಕೆ ಶಾಂತಿ ಸಿಗಲೆಂದು ಪ್ರಾರ್ಥಿಸುವದಕ್ಕಾಗಿ, ಮೂವರು ಕಣ್ಣು ಮುಚ್ಚಿಕೊಂಡು ನಿಂತರು. ಆಗ ದೇವರು ಇವರ ಪ್ರಾರ್ಥನೆಯನ್ನು ಮನ್ನಿಸಿದನೋ ಏನೋ ಎನ್ನುವಂತೆ, ‘ಬ್ರಹ್ಮ, ವಿಷ್ಣು, ಮಹೇಶ್ವರ’ ಲೋಕಪಾಲಕರು ಬಂದು ಬೆಳಗಿದರು. ಆ ವೇಳೆಯಲ್ಲಿ ಅಲ್ಲಿ ಸಹಸ್ರ ಸೂರ್ಯರು ಪ್ರಕಟರಾದರೋ ಎನ್ನುವಂತೆ ತೇಜವು ಬೆಳಗುತ್ತಿತ್ತು. ಈ ಅದ್ಭುತಾಶ್ಚರ್ಯವನ್ನು ನೋಡಬೇಕೆಂದು, ಮೇಲೆ ಮುಖ ಮಾಡಲು, “ಭಾರತಮಾತೆಯ ಹಸ್ತಗಳಲ್ಲಿ ಶೋಭಿಸಿ, ಆಕೆಯ ದುಃಖಕ್ಕಾಗಿ ಸರ್ವಸ್ವವನ್ನೂ ತ್ಯಾಗ ಮಾಡಹಚ್ಚತಕ್ಕವನು ನಾನೇ” ಎಂದು ಪ. ಪೂ. ಭಗವಾ ಧ್ವಜವು ಆಕಾಶದಲ್ಲಿ ಕಂಗೊಳಿಸುತ್ತಿತ್ತು.

## ಅಜಿತ ಪ್ರಕಾಶನ ಹಾಗೂ ವಿಜನ್ನಿಯ ಪುಸ್ತಕಗಳು.

| | | | | |
|---|---|---|---|---|
| 1 | A Pen Picture of Pandit Jawaharlal Nehru--by D. G. waded | 1 | 0 | 0 |
| 2 | "Sthita Pradnya Sutra" V. R. Kapre | 0 | 6 | 0 |
| ೩ | ಜನೆವರಿ ೨೬—ಶ್ರೀಕೃಷ್ಣ ಪಾಟೀಲ ನಾಟಕ | ೦ | ೫ | ೦ |
| ೪ | ಸಾಕ್ಷರತಾ ಸಾಫಲ್ಯ—ಸಂಗಮೇಶ ಗೋ. ,, | ೦ | ೫ | ೦ |
| ೫ | ವಿಜಯಶ್ರೀ—ಮಿರ್ಜಿ ಅಣ್ಣಾರಾವ ಕಥಾಸಂಗ್ರಹ | ೧ | ೦ | ೦ |
| ೬ | ಹಂಬಲ—ಕೃಷ್ಣಮೂರ್ತಿ ಕಿತ್ತೂರ B. A. ,, | ೧ | ೦ | ೦ |
| ೭ | ಅಮೃತಧಾರೆ-ವೀರಪ್ಪಾ ಯಗಟಿ B.A. LL. B ,, | ೧ | ೦ | ೦ |
| ೮ | ಅಜಿತನ ಶಿಸ್ತು—ವಾ. ಭೀ. ಥಿಟೆ B. A. ,, | ೦ | ೫ | ೦ |
| ೯ | ದಾದಿ— ಶ್ರೀಕೃಷ್ಣ ಪಾಟೀಲ ,, | ೦ | ೫ | ೦ |
| ೧೦ | ಕನ್ನಡ—ಮರಾಟಿ ,, ,, ,, | ೦ | ೨ | ೦ |
| ೧೧ | ಬಲಿದಾನ—ಪ್ರಿ. ವಿಜಯಕುಮಾರ ಕಾದಂಬರಿ | ೦ | ೧೨ | ೦ |
| ೧೨ | ಕಣ್ಣುಮುಂದೆ ಕೊಲೆ—ಅನ್ನಾಳಕರ ,, | ೧ | ೮ | ೦ |
| ೧೩ | ಕಾಂಗ್ರೆಸದ ಇತಿಹಾಸ—ಭಾ. ವಿ. ಗೊಗಟೆ | ೦ | ೧೦ | ೦ |
| ೧೪ | ಹಿರಿಮೆಯ ಮಂತ್ರ—ಶಿಂಪಿ ಲಿಂಗಣ್ಣನವರು | ೦ | ೩ | ೦ |
| ೧೫ | ಗಲಿವ್ಹರನ ದೇಶಸಂಚಾರ—ಅನಂತ.ಕುಲಕರ್ಣಿB. A. | ೦ | ೬ | ೦ |
| ೧೬ | ರಾಷ್ಟ್ರಗೀತಾ ಮಂಜರಿ—ತು. ರ. ಕೊಪರಡೆ ಪದ್ಯ | ೦ | ೪ | ೦ |
| ೧೭ | ಮಹಾತ್ಮಾ ಗಾಂಧಿಯವರ ಕೊಲೆ ,, ,, | ೦ | ೮ | ೦ |
| ೧೮ | ದೊರೆ ಮಲ್ಲಸರ್ಜನ ದುಂದುಮಿ ,, | ೨ | ೦ | ೦ |
| ೧೯ | ಭಾರತ ಭೂ ಮಹಿಮೆ— ರಾಮನಾಮೆ ,, | ೦ | ೩ | ೦ |
| ೨೦ | ಶ್ರೀಮಾರುತಿ ಉಪಾಸನಾ ,, ,, | ೦ | ೩ | ೦ |
| ೨೧ | ಶ್ರೀಲಕ್ಷ್ಮೀ ವೇಂಕಟೇಶ ಸ್ತೋತ್ರಂ ,, ,, | ೦ | ೫ | ೦ |
| ೨೨ | ಮನೋಬೋಧೆ— ,, ,, | ೦ | ೫ | ೦ |
| ೨೩ | ಶ್ರೀ ಶನಿಮಹಾತ್ಮ್ಯ—ನಾ. ಮ. ಪಾಟೀಲ ಗದ್ಯ-ಪದ್ಯ | ೦ | ೩ | ೦ |
| ೨೪ | ಶ್ರೀಕ್ಷೇತ್ರ ಯಡೂರ—ಕರವೀರಪ್ಪಾ ಛಪ್ರೆ | ೨ | ೮ | ೦ |
| | **ಶ್ರೀಮತ್ ಶಿವಾನಂದ ಸ್ವಾಮಿಗಳ** | | | |
| ೨೫ | ಉದರದ ಆರೋಗ್ಯ ಮತ್ತು ಸ್ನಾಯುಬಲ ಸಂವರ್ಧನ | ೨ | ೬ | ೦ |
| ೨೬ | ಬ್ರಹ್ಮಚರ್ಯವೇ ಜೀವನ ಅರ್ಥಾತ್ ವೀರ್ಯನಾಶವೇ ಮೃತ್ಯು | ೩ | ೮ | ೦ |

# 'ಹೃದಯ ಸಿರಿವಂತರು'

ವೈಶಾಖದ ಹುರಿ ಬಿಸಿಲು ಭೂಮಿಯನ್ನು ಬಿಸಿ ಮಾಡಿ, ನಡೆಯು ವವರ ಕಾಲುಗಳಿಗೆ ಬೊಬ್ಬೆ ಬರುವಂತೆ ಮಾಡಿತ್ತು. ನಾಲ್ಕಾರು ವರುಷ ಗಳಿಂದ ಸಮಯಕ್ಕೆ ಸರಿಯಾಗಿ ಮಳೆ ಬೀಳದಿದ್ದಕ್ಕೆ ಭೂಮಿ ಕೆಂಡದಂತೆ ಕಾದಿತ್ತು. ಅಲ್ಲಲ್ಲಿ ಅಂಗಳದಲ್ಲಿ 'ಪೀಕುಜಾಲಿ' ಗಿಡಗಳ ನೆರಳಲ್ಲಿ ಚಿಣ್ಣರು ಆಟವಾಡುತ್ತಿದ್ದರು. ಆಟವಲ್ಲಿ ಮಗ್ನರಾಗಿದ್ದ ಆ ಹುಡುಗರ ಅಂತರಾಳ ದಿಂದ ಹೊರಬಂದ ಹಾಡು ಹೀಗಿತ್ತು,

— "ಟಿಂಗ್ ಟಿಂಗ್ ಟಿಂಗು
ಎಂಟಾಣೆ ಸುಂಗು
ಹತ್ತು ವೈಸ ಸಾಲ
ಹನುಮಂತನ ಬಾಲ" ಈ ಹಾಡಿನ ವಗಟು ಆ ಚಿಕ್ಕ ಹುಡುಗರಿಗೇ ಗೊತ್ತು. ಇದು ಅವರಲ್ಲಿ ಯಾವ ಕಾರಣಕ್ಕೆ ಮೂಡಿತೋ ಆ ಭಗವಂತನೇ ಬಲ್ಲ.

"ಹೇss, ಏನ್ಮಾಡ್ತೀ. ಏಸಿ ಹುಡುಗನ್ನ ಕರ್‍ಕಾ ಬಾ, ನಾನು ಅಡ್ಗಿ ಮಾಡ್ತೀನಿ ಒಂದೇ ಸಮ ಹುಡುಗ ಹರ್‍ಕಾಕ ಹತ್ತೈತಿ. ನಿನಗ ಕೀವಿ ಕೇಳದಿಲ್ಲೇನು" ? ಅಡಿಗೆ ಮನೆಯೊಳಗಿನಿಂದ ಕೂಗಿದಳು ಹೆಂಡತಿ ಎಲ್ಲವ್ವ ಮನೆಯ ಮುಂದೆ ಕುಳಿತು ಕೊರಿಬೀಡಿ ಸೇದುತ್ತಾ ಅಂಗಳದಲ್ಲಿ ಆಟವಾಡು ತ್ತಿರುವ ಹುಡುಗರ ಹಾಡನ್ನು ಮೆಲುಕು ಹಾಕುತಿದ್ದರಂಗ, ಎಲ್ಲವ್ವನ ಗಡುಸು ಧ್ವನಿಗೆ ಹೆದರಿ, ದಡಬಡಿಸಿ ಎದ್ದು ಒಳಗೆ ಧಾವಿಸಿದನು.

ಅಡಿಗೆ ಮನೆಯೊಳಗೆ ಕಾಲಿಡುತ್ತಿದ್ದಂತೆ ಹೆಂಡತಿ ಎಲ್ಲವ್ವನ ಕೆಂಗಣ್ಣು ಗಳನ್ನು ನೋಡಿದ ರಂಗ, ಬೆದರಿ ಬೆಂಡಾದ. ತುಟಿ ಪಿಟಕ್ಕೆನ್ನದೆ ಅವಳು ಕೊಟ್ಟ ಮಗುವನ್ನು ಎತ್ತಿಕೊಂಡು ಹೊರಗೆ ದಾವಿಸಿದ. ಅಲ್ಲೇ ಇದ್ದ ರಂಗನ ತಾಯಿ ರಾಮಕ್ಕ "ಲೋ ರಂಗಾ, ಅಂಗಳದಲ್ಲಿ ಆಡುವ ಆ

ಮೂಳಗಳನ್ನು ಕರಿ, ಹೊಲಕ್ಕೆ ಕೋಲಿ ಆರಿಸಾಕ ಹೋಗ್ಲಿ. ತಿಂದು ತಿಂದು 'ತನಿ' ಆಗ್ಯಾವ. ಈ ದರಿದ್ರಗಳನ್ನು ಯಾಕಾದರೂ ಕರಕೊಂಡು ಬಂದೆ ?..." ಎಂದು ದಬಾಯಿಸುವ ತಾಯಿಯನ್ನು ಓರೆಗಣ್ಣಿನಿಂದ ನೋಡುತ್ತಾ ಹುಡುಗರ ಕಡೆ ಹೊರಟೆ. ರಂಗನ ಕರುಳು ಕರುಣೆಯ ಗೂಡಾಗಿದ್ದರೂ ಹೆಂಡತಿ ಮತ್ತು ತಾಯಿಯರಿಂದ ಕರಿಗಿ ಹೋಗು ವುದರಲ್ಲಿತ್ತು.

ಮನೆಯೊಳಗಿಂದ ಕರ್ಣಕಠೋರವಾದ ಎಲ್ಲವ್ವನ ಮಾತುಗಳು ಹೊರಗೆ ಇದ್ದ ರಂಗನ ಕಿವಿಯೊಳಗೆ ಮಾರ್ಧನಿಸಿದವು. ಆ "ವಂಡ-ಪುಂಡ ಹುಡು ಗರನ್ನು ಕರ್‍ಕೊಂಡು ಬರಬ್ಯಾಡ ಅಂಥ ಬಡ್ಕೊಂಡೆ, ನನ್ನ ಮಾತು ಕೇಳಿದ್ಯಾ ? ಈಗನೋಡು, ಎಲ್ಲರಿಗೂ ನಾನು ಕೂಳು ಮಾಡಿ ಹಾಕ್ಬೇಕು. ನನ್ನ ಕರ್ಮ, ನನ್ನ ಹಣೇಬರಹ, ಕರ್‍ಕೊಂಡು ಬಂದು ನನಗೆ ಮೂಲ ಮಾಡ್ದಿ. ಇವುಗಳನ್ನು ಆ ಮಾರಿ ತಗೊಂಡೋಗಬಾರದ ನನ್ನ ಮಕ್ಕಳನ್ನು ನನಗೆ ಸಾಕಾಕ ಆಗದಿಲ್ಲ. ಅವ್ರಾಗ ಈ ಯಳ್ಡು ಹುಡುಗ್ರನ್ನು ತಂದು ಜಲ್ಮಕ್ಕ ಮೂಲವಾಡ್ದಿ. ನಿನಗ ಮತಿ ಇದ್ರ ಇಂಗ ಮಾಡ್ತಿದ್ಯಾ ?" ಎಂದು ತನ್ನ ಹೊಟ್ಟೆಕಿಚ್ಚನ್ನು ರಂಗನ ಮೇಲೆ ಪ್ರಯೋಗ ಮಾಡಿದಳು. ತನ್ನ ಅಕ್ಕನ ಮಕ್ಕಳಾಗಿದ್ದರೂ ಆ ಹುಡುಗರನ್ನು ಕಂಡರೆ ಎಲ್ಲವ್ವನಿಗೆ ಆಗುತ್ತಿರ ಲಿಲ್ಲ. ಆ ಅನಾಥ ಮಕ್ಕಳ ಮೇಲೆ ದ್ವೇಷ ಕಾರುತ್ತಿದ್ದಳು. ಅತ್ತೆ ರಾಮಕ್ಕ, ಸೊಸೆಯ ದ್ವೇಷದ ಕಿಚ್ಚಿನ ತುಪ್ಪ ಎರಚಲು ಸಹಾಯಕಳಾಗುತ್ತಿದ್ದಳು.

ಕೇಳಿಯೂ ಕೇಳದವನಂತೆ ಇದ್ದ ರಂಗ, ಅಂಗಳದಲ್ಲಿ ತನ್ನ ಮಕ್ಕಳ ಜೊತೆ ಹರುಕು ಅಂಗಿ, ಚಿಂದಿ ಚಣ್ಣ ಹಾಕಿಕೊಂಡು ಆಗಾಗ ಕೆಳಗಿಳಿಯುವ ಚಣ್ಣಗಳನ್ನು ಮೇಲೇರಿಸುತ್ತಾ ಆಟವಾಡುತ್ತಿರುವ ಬಸವ ಮತ್ತು ನಾಗ ನನ್ನು ನೋಡಿ, ನಿಟ್ಟುಸಿರುಗರೆದನು. "ತಂದೆ-ತಾಯಿ ಇಲ್ಲದ ಈ ತಬ್ಬಲಿ ಹುಡುಗರನ್ನು ಕರ್‍ಕೊಂಡು ಬಂದದ್ದು ನನ್ನ ತಪ್ಪೇ ? ಎಲ್ಲರೂ ತಿರಸ್ಕರಿಸಿ ದಾಗ ನನ್ನ ಕರುಳು ಚುರ್ ಅಂದಿತ್ತು, ಬೀದಿಯ ಪಾಲಾಗಬಾರದೆಂದು

ಹೀಗೆ ಮಾಡಿವೆ, ಹನ್ನೆರಡು ವರುಷದ ಬಸವ, ಹತ್ತು ವರುಷದ ನಾಗ ಈ ಚಿಕ್ಕ ವಯಸ್ಸಿನಲ್ಲಿ ಒಬ್ಬಂಟಿಗರಾಗಿ ಹೇಗೆ ಜೀವಿಸುತ್ತಾರೆ ? ನಮ್ಮ ಹೊಲ ದಲ್ಲಿ ಚಿಕ್ಕ ಚಿಕ್ಕ ಕೆಲಸಕ್ಕೆ ಹಚ್ಚಿದರಾಯಿತು ಅಂದುಕೊಂಡು ಕರೆತಂದದ್ದು ನನ್ನ ತಪ್ಪೇ ? ಈ ಪರದೇಶಿ ಹುಡುಗರನ್ನು ಕಂಡರೆ ಹೀಗೇಕೆ ಮೃಗವಾಗು ತ್ತಾಳೆ ? ಮೇಲಾಗಿ ಈ ಹುಡುಗರು ತನ್ನ ಅಕ್ಕನ ಮಕ್ಕಳಲ್ಲವೇ ? ದೇವರು ನಮಗೆ ಏನು ಕಡಿಮೆ ಮಾಡಿದ್ದಾನೆ ? ಹೊಟ್ಟೆಗೆ ಬಟ್ಟೆಗೆ ಸರಿಯಾಗಿಟ್ಟಿ ದ್ದಾನೆ. ಹೊಲ, ಮನೆ ದನ-ಕರುಗಳನ್ನು ಕೊಟ್ಟಿದ್ದಾನೆ. ಆಕೆಯ ಮತ್ತು ಅವ್ವನ ಆರ್ಭಟಗಳಿಂದ ನಾನು ಮೂಕನಾಗಿದ್ದೇನೆ. ಈ ಮಕ್ಕಳನ್ನು ಆ ದೇವರೆ ಕಾಪಾಡಬೇಕು" ಎಂದುಚಿಂತಿಸುತ್ತಾ ಯೋಚನಾ ಮಗ್ನನಾದ ರಂಗ.

ನಾಗನಿಗೆ ಯಾವುದೋ ಕಾಯಿಲೆ. ಇದರಿಂದ ಅವನು ಆಗಾಗ ನರು ಳುತ್ತಿದ್ದ. ಇವನನ್ನು ಸಂತೈಸುವವರು ಯಾರು ? ರಂಗನಿಗೆ ಇದು ಗೊತ್ತಿ ದ್ದರೂ ಅವನು ಏನೂ ಮಾಡುವ ಹಾಗಿಲ್ಲ, ಹೆಂಡತಿಯ ದರ್ಪದ ನಿಲು ವಿನ ಮುಂದೆ ಅವನು ಕುಬ್ಜನಾಗಿದ್ದ. ಈ ಅನಾಥ ಹುಡುಗರಿಗೆ ಹೊಸ ಬಟ್ಟೆ ತರಲು ರಂಗನ ತಾಯಿ ಮತ್ತು ಹೆಂಡತಿ ತಕರಾರು ಮಾಡಿದರು. ಹೊತ್ತಿಗೆ ಸರಿಯಾಗಿ ಊಟಕ್ಕೆ ಹಾಕದಿದ್ದಾಗ ರಂಗನ ಮನ ಮಮ್ಮಲ ಮರುಗುತ್ತಿತ್ತು. ಹಸಿದು ಕಂಗಾಲಾದ ಈ ಅನಾಥನನ್ನು ಅಡವಿಗೆ ಕಟ್ಟಿಗೆ ತರಲಿಕ್ಕೆ ಕಳಿಸುತಿದ್ದರು. ಹೋಗುವಾಗ ಹಳಸಿದ್ದ ಮುದ್ದೆಯನ್ನೋ ನವಣೆ ಅನ್ನವನ್ನೋ ಬುತ್ತಿ ಕಟ್ಟಿ ಕೊಡುತ್ತಿದ್ದರು. ಇದು ಇವರಿಗೆ ಸಾಕಾಗ ದಿದ್ದರೂ ಅದರಲ್ಲೇ ತೃಪ್ತಿಪಡುತ್ತಿದ್ದರು. ಅಪ್ಪ-ಅಮ್ಮನನ್ನು ನನೆದು ರೋಧಿಸುತ್ತಿದ್ದರು. ಇವರ ರೋಧನ 'ಅರಣ್ಯರೋಧನ'ವಾಗಿತ್ತು,

ಆ ದಿನ ಎಲ್ಲವ್ವ, "ಲೋ, ನಾಗಾ, ನಿನಗೇನು ಧಾಡಿ ಆಗಿದೆ ? ಕಾಲೇಕ ಹೋಗಿ ಈ ಬಟ್ಟೆಗಳನ್ನು ತೊಳೆದುಕೊಂಡ ಬಾ" ಎಂದು ಜ್ವರ ಬಂದು ಮಲಗಿದ್ದವನನ್ನು ಬೈದು ಎಬ್ಬಿಸಿ ಕಳಿಸಿದಳು. ಬಸವನನ್ನು ಹೊಲಕ್ಕೆ ಎತ್ತು ಗಳನ್ನು ಮೇಯಿಸಿಕೊಂಡು ಬರ ಹೇಳಿ "ಬರುವಾಗ ಕಟ್ಟಿಗಿ ಹೊತ್ಗೊಂಡು

ಬಾ, ಇಲ್ಲಂದ್ರೆ ರಾತ್ರಿಗೆ ನಿನಗ ಖೂಳು ಇಲ್ಲ" ಎಂದು ಕಟ್ಟಾಜ್ಞೆ ಮಾಡಿ ಕಳಿಸಿದಳು. ಇದನ್ನೆಲ್ಲಾ ನೋಡಿದ ರಂಗನ ಅಂತರಾತ್ಮ ಕುದಿಯಿತು. ಅವನಲ್ಲಡಗಿದ್ದ ತಾಯ್ತನ ತಳ ಮಳಗೊಂಡಿತು. ಕಣ್ಣಂಚಿಗೆ ಬಂದ ಗಂಗೆಯನ್ನು ಅರ್ಧದಲ್ಲೇ ತಡೆದನು. ಏಕೆಂದರೆ ಗಂಗೆ ಭೂಮಿಗೆ ಧುಮಿಕ್ಕಿದ್ದನ್ನು ಎಲ್ಲಪ್ಪ ನೋಡಿದರೆ ತನಗೆ ಅಘಾತ ಕಾದಿದೆ ಎಂದು ಅವನು ತಿಳಿದಿದ್ದ. "ತಾಯಿ ಇಲ್ಲದೇ ತಂದೆಯ ಹತ್ತಿರ ಹೇಗೋ ಈ ಹುಡುಗರು ಬದುಕುತಿದ್ದರು. ಅದೂ ಆ ದೇವರಿಗೆ ಮನಸಿಲ್ಲವೆಂದು ತಂದೆಯನ್ನು ಕಿತ್ತುಕೊಂಡು ಬಿಟ್ಟ ಈ ಮಕ್ಕಳಿಗೆ ಯಾರುಗತಿ ? ಎಂದು ಜನ ಅನ್ನುತ್ತಿರುವಾಗ ಹತ್ತಿರದ ಸಂಬಂಧಿಯಾದ ನಾನು, ಅವರೆಲ್ಲರ ಮುಂದೆ 'ನಾನು ಸಲುಹುತ್ತೇನ' ಎಂದು ಹೇಳಿ ಕರಕೊಂಡು ಬಂದದ್ದು ನನ್ನ ತಪ್ಪೇನು ಈ ರಾಕ್ಷಸಿಯುರವಾದ. ಈ ಕಟುಕರ ನಡುವೆ ಈ ಗಿಣಿಯಂತ ಮಕ್ಕಳು ಜೀವಿಸುವುದು ಹೇಗೆ ?" ಎಂದು ತನ್ನಲ್ಲೇ ಪರಿತಾಪಪಟ್ಟು ಕೊಂಡನು.

ರಂಗನ ತಾಯಿ ರಾಮಕ್ಕ ಮಹಾಕ್ರೂರಿಯಾಗಿದ್ದಳು. ಅನಾಥರಾದ ನಾಗ. ಬಸವರನ್ನು ಕಂಡರೆ ಕಿಡಿಕಾರುತ್ತಿದ್ದಳು. ಇವರ ನೆರಳು ಸಹ ಈಕೆಗೆ ಆಗುತ್ತಿರಲಿಲ್ಲ ಗದ್ದೆಗ ನೀರು ಕಟ್ಟಲು ರಾತ್ರಿಯಲ್ಲಿ ಈ ಹುಡುಗರನ್ನು ನಿರ್ಧಾಕ್ಷಿಣ್ಯವಾಗಿ ದಬ್ಬುತ್ತಿದ್ದಳು. ರಾತ್ರಿ ಇಡೀ ಈ ಹುಡುಗರು ತಮ್ಮ ದೀನ ಸ್ಥಿತಿಯನ್ನು ಸ್ಮರಿಸಿಕೊಂಡು ದಿಕ್ಕು ಕಾಣದ ಅಂತಹ ಕಾರ್ಗತ್ತಲಲ್ಲಿ ಭೂಮಿಗೆ ನೀರುಣಿಸುತ್ತಿದ್ದರು. ಇದನ್ನು ನೋಡಲಾರದೇ ರಂಗ ತಡದಾಗ ರಾಮಕ್ಕ "ನೀನು ಸುಮ್ಮಬಿದ್ದಿರು, ನಿನಗ್ಯ ಏನೂ ತಿಳಯಾದಿಲ್ಲ. ಕತ್ಲದಾಗ ಏನಾರ ಕಡಿದು ಸಾಯ್ಲಿ ಈ ಪಾಪಿ ಮುಂಡೇವು. ಇವನ್ನು ದೊಡ್ಡವು ಮಾಡಿದರೆ ನಮಗೇನು ಲಾಭ ? " ಎಂದು ಹೇಳಿ ರಂಗನ ಬಾಯಿ ಮುಚ್ಚಿಸಿದಳು ರಾಮಕ್ಕ. ಇದು ರಂಗನಿಗೆ ನುಂಗಲಾರದ ತುತ್ತಾಗಿತ್ತು, ಬಿಸಿ ತುಪ್ಪವಾಗಿತ್ತು. 'ನುಂಗಿದರೆ ಬಾಯಿ ಸುಡುತ್ತೆ, ಉಗಿದರೆ ತುಪ್ಪ ಹೋಗುತ್ತೆ' ಅನ್ನುವ ಗಾದೆಯಂತಾಯಿತು.

"ಸಮುದ್ರಕ್ಕೆ ತೆರೆಗಳು ಹೇಗೆ ಸಂಬಂಧವೋ ಹಾಗೆ ಮಾನವನ ಜೀವಿತದಲ್ಲಿ ಕಷ್ಟ ಸುಖಗಳು ಜನ್ಮದಾರಭ್ಯ ಬರತಕ್ಕಂತಹವುಗಳು. ಇವು ಬೇರೆ ಎಲ್ಲಿಂದಲೂ ಬಂದಿಲ್ಲ, ಯಾರಿಂದಲೂ ಕೊಡಲ್ಪಡಲಿಲ್ಲ. ತಾನೆ ಸೃಷ್ಟಿಸಿಕೊಂಡದ್ದು. ಯಾರೂ ಕಷ್ಟಗಳನ್ನು ಬಯಸುವುದಿಲ್ಲ. ಪ್ರತಿ ಒಬ್ಬನೂ ಸುಖವನ್ನೇ ಬಯಸುತ್ತಾನೆ. ಸುಖಕ್ಕಾಗಿಯೇ ವ್ಯವಹಾರ, ರಾಜಕೀಯ, ಕಿತ್ತಾಟ, ಹೋರಾಟ. ಮೋಸ, ವಂಚನೆಗಳು. ಆದರೆ ನಿಜವಾದ ಸುಖವನ್ನು ಯಾರೂ ಕಂಡಿಲ್ಲ. ಅನುಭವಿಸಿಯೂ ಇಲ್ಲವೆನ್ನ ಬಹುದು. ಸುಖವನ್ನು ಬಯಸಿ ಪಾಪಕಾರ್ಯಗಳಲ್ಲಿ ತೊಡಗಿರುವೆವು ಎಂಬ ಕಲ್ಪನೆಯೂ ಇಲ್ಲ. ಅದಕ್ಕಾಗಿ ಎಂತಹ ತ್ಯಾಗಕ್ಕೂ ಸಿದ್ಧ. ಆದರೆ ಸುಖ ವೆಂಬುದು ಮರುಳು ಗಾಡಿನಲ್ಲಿ ನೀರು ಬಯಸಿದಂತೆ, ಸುಖ ಬಂದಾಗ ಮನುಷ್ಯ ಸ್ವಾಭಾವಿಕವಾಗಿಯೇ ದೇವರನ್ನು ಮರಿಯುತ್ತಾನೆ. ದರ್ಪ, ಅಹಂಕಾರ, ನಾನು ನನ್ನದು, ನನ್ನಿಂದ ಎಂಬ ಅಹಂಕಾರದಿಂದ ನೀತಿ ಬಾಹಿರನಾಗುತ್ತಾನೆ. ಹೀಗಾಗಿ ಸುಖದಿಂದ ವಂಚಿತನಾಗುತ್ತಾನೆ. ಗಳಿಸಿದ ಪುಣ್ಯವನ್ನು ಕಳೆದುಕೊಳ್ಳುತ್ತಾನೆ" ಎಂಬ ಹಿರಿಯರ ಅನುಭವದಂತೆ ರಂಗನ ಎರಡು ಹೋರಿಗಳು ಇದ್ದಕ್ಕಿದ್ದ ಹಾಗೆ ಸತ್ತುಹೋದವು ! ಇದನ್ನು ಸಹ ರಂಗನ ಹೆಂಡತಿ ಎಲ್ಲವ್ವ." ಆ ದರಿದ್ರ ಹುಡುಗರನ್ನು ಕರ್ಕೊಂಡು ಬಂದ ದ್ದಕ್ಕೆ ಹೀಗಾಯಿತು" ಎಂದು ರಂಗನಿಗೆ ಮನ ಬಂದಂತೆ ಅಂದು ಉಟ್ಟ ಹರುಕು ಬಟ್ಟೆಯಲ್ಲೇ ಬಸವ, ನಾಗರನ್ನು ಮನೆಯಿಂದ ಹೊರ ಪಬ್ಬಿಸಿದಳು.

ಜ್ವರ ಬಂದ ನಾಗನನ್ನು ಬಸವ ಕರೆದುಕೊಂಡು ಬೀದಿಗಿಳಿದ. ಭಿಕ್ಷೆ ಬೇಡುತ್ತಾ ಚಲನ ಚಿತ್ರ ಮಂದಿರದ ಹತ್ತಿರ ಬಂದಾಗ ಜ್ವರ ಬಂದ ನಾಗ ಪ್ರಜ್ಞೆತಪ್ಪಿ ಬಿದ್ದುಬಿಟ್ಟ. ಬಿದ್ದ ತಮ್ಮನನ್ನು ನೋಡಿದ ಬಸವಗೋಳೋ ಎಂದು ಅತ್ತುಬಿಟ್ಟನು. ಇದನ್ನೆಲ್ಲಾ ಹತ್ತಿರವೇ ಇದ್ದ ಡಬ್ಬಿ ಅಂಗಡಿ ನಡೆಸುತ್ತಿದ್ದ ಮಾಸ್ತ್ಯವ್ವ ನೋಡಿದಳು. ನಾಗನನ್ನು ಎತ್ತಿ ತಂದು ಸಂತೈ ಸಿದಳು. ಬಸವನಿಂದ ಎಲ್ಲಾ ವೃತ್ತಾಂತ ಕೇಳಿದ ಮೇಲೆ ಮಾಸ್ತ್ಯವ್ವ, ಇವರನ್ನು ತನ್ನಲ್ಲೇ ಉಳಿಸಿಕೊಂಡಳು. ತನ್ನ ಮೂರು ಮಕ್ಕಳಲ್ಲಿ ಇವರನ್ನು

ಸೇರಿಸಿಕೊಂಡಳು. ಅನಾಥರಾದ ಈ ಮಕ್ಕಳಿಗೆ ಮಾಸ್ತ್ಯವ್ವನೆ ತಾಯಿ ಆದಳು. ಅಂಗಡಿಗೆ ಚಾ ಕುಡಿಯಲು ಬರುವ ಹಮಾಲರು ಈ ಅನಾಥರಿಗೆ ಅಣ್ಣಂದಿರಾದರು.

ನಾಗನಿಗೆ ಬಂದ ಜ್ವರ ಇಳಿಯಲಿಲ್ಲ. ಉಲ್ಬಣವಾಗುತ್ತಾ ಬಂದವು, ಮಾಸ್ತ್ಯವ್ವ ಡಾಕ್ಟರರಿಗೆ ತೋರಿಸಿ ತುಂಬಾ ಹಣ ಖರ್ಚು ಮಾಡಿಕೊಂಡಳು, ಆದರೆ ಕಾಯಿಲೆ ವಾಸಿಯಾಗುವ ಲಕ್ಷ್ಮಣಗಳು ಕಾಣದಾದಾಗ ಕಂಗಾಲಾದಳು ಡಾಕ್ಟರರು "ಈ ಹುಡುಗನನ್ನು ಈ ವಳಗಾಗಿ ತೋರಿಸಿದರೆ ಚನ್ನಾಗಿತ್ತು" ಎಂದು ತಮ್ಮ ಸಂಶಯವ್ಯಕ್ತಪಡಿಸಿದರು. ರಂಗನ ಮನೆಯಲ್ಲಿ ಸರಿಯಾಗಿ ಊಟವಿಲ್ಲದೆ ಹಗಲೂ ರಾತ್ರಿ ಶ್ರಮಪಟ್ಟದ್ದಕ್ಕೆ ಹೀಗಾಗಿರಬಹುದು ಅನ್ನು ವುದನ್ನು ಡಾಕ್ಟರರಿಗೆ ತಿಳಿಸಿದಳು.

ಡಾಕ್ಟರರು "ಅವರೆಂಥವರಮ್ಮ ಆಗಲೆ ಈ ಮಗುವನ್ನು ತೋರಿಸಿದ್ದರೆ ನೆಟ್ಟಗಿತ್ತು. ತಮ್ಮ ಸ್ವಂತ ಮಗುವಾಗಿದ್ದರೆ ಹೀಗೆ ಮಾಡುತ್ತಿದ್ದರೇನು ? ಜ್ವರ ಬಂದಾಗ ಸಹ ಮಗುವಿಗೆ ಶ್ರಮದ ಕೆಲಸಗಳನ್ನು ಮಾಡಿಸಿದ್ದಾರೆ. ಛಳಿ, ಮಳೆ ಅನ್ನದೆ ಅಡವಿಗೆ ಕಳಿಸಿದ್ದಕ್ಕೆ ಈ ಮಗುವಿಗೆ ಇಂತಹ ದುಃಸ್ಥಿತಿ ಬಂದಿದೆ ಇನ್ನೂ ನಾಲ್ಕು ದಿನ ಬಿಟ್ಟು ನಿನಗೆ ಯಾವುದಕ್ಕೂ ನಾನು ತಿಳಿಸು ತ್ತೇನೆ. ಅಲ್ಲಿಯವರಿಗೆ ಈ ಮಾತ್ರೆಗಳನ್ನು ಕೊಡುತ್ತಿರು" ಎಂದು ಹೇಳಿ ಕಳಿಸಿದರು. ಮಾಸ್ತ್ಯವ್ವನ ಮನಸ್ಸು ತಳಮಳಗೊಂಡಿತು. ನಾಗನ ಮುಖ ನೋಡಿದ ಆಕೆಯ ಹೃದಯ ವಿಲಿ ವಿಲಿ ಒದ್ದಾಡಿತು.

"ನಾಗನನ್ನು ಇನ್ನು ಒಂದು ವಾರದೊಳಗೆ ದೊಡ್ಡ ಡಾಕ್ಟರರಿಗೆ ತೋರಿಸದಿದ್ದರೆ ಅವನು ಉಳಿಯುವ ಭರವಸೆ ಇಲ್ಲ" ಎಂದು ಡಾಕ್ಟರ್ ಮಹಾಬಲೇಶ್ವರವರು ಹೇಳಿದ್ದಕ್ಕೆ ಮಾಸ್ತ್ಯವ್ವನ ದುಃಖದ ಕಟ್ಟೆ ಒಡೆ ಯಿತು. "ಸುಮಾರು ಸಾವಿರ ರೂಪಾಯಿಗಳ ಖರ್ಚು ಬರಬಹುದು" ಎಂದು ಹೇಳಿದ ಡಾಕ್ಟರರ ಮಾತು ಆಕೆಯನ್ನು ದಂಗು ಬಡಿಸಿತು. ಚಿಕ್ಕದಾದ

ಅಂಗಡಿ ನಡೆಸುತ್ತಿರುವ ಪ್ರಾಸ್ತ್ಯಕ್ಸ್ಸಿಗೆ ಅಷ್ಟೊಂದು ಹಣ ಜೋಡಿಸುವುದು ದುಸ್ತರವಾಯಿತು. ಇದನ್ನು ನಾಗನಿಗೆ ಅಣ್ಣೋದಿರಂತೆ ಇರುವ ಹಮಾಲರಿಗೆ ತಿಳಿಸಿದಳು. ಕೇಳಿದ ಹಮಾಲರು ಚಡಪಡಿಸಿದರು "ಅಷ್ಟೊಂದು ಹಣ ಹೇಗೆ ತರುವುದು ?" ಎಂದು ಯೋಚಿಸಿ, ಒಂದು ನಿರ್ಧಾರಕ್ಕೆ ಬಂದು ತಮ್ಮಲ್ಲಿಯ ಮುಖಂಡನ ಮುಂದೆ ಇದನ್ನು ವಿಷದ ಪಡಿಸಿದರು.

ಹಮಾಲರ ಮುಖಂಡ "ನಾವೆಲ್ಲಾ ಒಟ್ಟು ಅಂದಾಜು ನಲವತ್ತು ಜನರಿದ್ದೇವೆ. ಒಬ್ಬೊಬ್ಬರು ಹತ್ತು ರೂಪಾಯಿ ಕೊಟ್ಟರೆ, ನಾಲ್ಕುನೂರು ಆಗುತ್ತವೆ. ಉಳಿದದ್ದಕ್ಕೆ ಆಯಿಲ್ ಮಿಲ್ ಮಾಲಕರನ್ನು ಕೇಳೋಣ" ಎಂದು ಸಲಹೆ ನೀಡಿದ್ದಕ್ಕೆ ಎಲ್ಲಾ ಹಮಾಲರು ಇವಕ್ಕೆ ಒಪ್ಪಂಬಟ್ಟರು. ಕೆಲವು ಜನ ಮಿಲ್ ಮಾಲಕರು ಹತ್ತಿಪ್ಪತ್ತು ಕೊಟ್ಟರು. ದಾನದಲ್ಲಿ "ಕೊಡುಗೈ" ಅನ್ನಿಸಿಕೊಂಡ ಮಿಲ್ ಮಾಲಕರಾದ ಉಮಾಪತಿ ಎಟ್ಟರು "ಈ ನಾಗನಿಗೆ ತಗುಲುವ ಇಡೀ ಖರ್ಚನ್ನು ನಾನು ಕೊಡುತ್ತೇನ" ಎಂದು ಹೇಳಿ, ನಾಗನನ್ನು ಬಳ್ಳಾರಿಗೆ ಕರೆದುಕೊಂಡು ಹೋಗಲು ತಮ್ಮ ಗುಮಾಸ್ತನನ್ನು ಏರ್ಪಾಟು ಮಾಡಿದರು. ಇದರಿಂದ ಹಮಾಲರು ಖುಷಿಗೊಂಡರು. ನಾಗನ ಹಿಂದೆ ಉಮಾಪತಿಯವರ ಗುಮಾಸ್ತ, ಹಮಾಲರಲ್ಲಿ ಒಬ್ಬ ಹಮಾಲ ಮಾಸ್ತ್ಯವ್ವ ಬಳ್ಳಾರಿಗೆ ಮಕ್ಕಳ ಆಸ್ಪತ್ರೆಗೆ ನಾಗನನ್ನು ಕರೆದುಕೊಂಡು ಧಾವಿಸಿದರು. ನಾಗ ದಾರಿಯಲ್ಲಿ ಪ್ರಯಾಣಿಸುತ್ತಿದ್ದಾಗ ಬಹಳ ಚಡಪಡಿಸಿದ. ಅವನ ಚಡಪಡಿಕೆ ನೋಡಿ ಇವರು ಬಹಳ ಸಂಕಟ ಪಟ್ಟರು. "ಯಾವಾಗ ಬಳ್ಳಾರಿ ಬಂದೀತು" ಎಂದು ತುದಿಗಾಲಲ್ಲಿದ್ದರು.

ನಾಗನ ಪರಿಸ್ಥಿತಿಯು ಮನವಿಯನ್ನು ಮನ್ನಿಸಿದ ಡಾಕ್ಟರರ ಶ್ರಮ, ಪರಿಶ್ರಮಗಳ ನಡುವೆ ರಾತ್ರಿ 10 ಗಂಟೆಗೆ ನಾಗ ಅಸುನೀಗಿದ. ಹಿಂದೆ ಹೋದವರು ಕಂಗಾಲಾದರು. ರಾತ್ರಿ ಹನ್ನೆರಡರ ಸಮುಮಾರಿಗೆ ಕಾರು ಬಾಡಿಗೆ ಮಾಡಿಕೊಂಡು ನಾಗನ ಪಾರ್ಥಿವ ಶರೀರವನ್ನು ತಮ್ಮ ಸ್ವಸ್ಥಾನಕ್ಕೆ ತಂದರು.

ನಾಗನ ಸಾವಿನ ಸುದ್ದಿ ಕೇಳಿದ ಹಮಾಲರ ಸಮೂಹವೇ ಬೆಳಿಗ್ಗೆ 8 ಗಂಟೆಗೆ ಕಲೆಯಿತು. ಎಲ್ಲರೂ ಕಣ್ಣೀರಿಡುವವರೆ. ತಮ್ಮನ ಸಾವಿನಿಂದ ಬಸವ ದುಃಖಿತಪ್ತನಾಗಿ ಬಿದ್ದು ಒರಳಾಡಿದ. ಇವನ ಸ್ಥಿತಿಯನ್ನು ನೋಡಿದವರು "ಪಾಪ ಅನಾಥ ಮಕ್ಕಳು" ಎಂದು ದುಃಖಿಸಿದರು. ಮಿಲ್ಲಿನಲ್ಲಿ ಕೂಲಿ ಕೆಲಸ ಮಾಡುವ ಹೆಂಗಸರು ಗೋಳೋ ಎಂದು ರೋಧಿಸಿದರು.

ಎಲ್ಲರೂ ಸೇರಿ ನಾಗನ ಶವವನ್ನು ರುದ್ರ ಭೂಮಿಯಲ್ಲಿ ಸೇರಿಸಿದರು. ದುಃಖಿತಪ್ತ ಇವರೆಲ್ಲರಿಗೂ ಉಮಾಪತಿಯವರು "ಆ ನಾಗ ದೇವರಿಗೆ ಪ್ರೀತಿ ಎಂದು ಕಾಣುತ್ತದೆ ಅದಕ್ಕಾಗಿಯೇ ಅವನನ್ನು ಬೇಗನೆ ಕರೆದ್ಕೊಂಡಬಿಟ್ಟ ಅವನು ಪುಣ್ಯಾತ್ಮ ಅಲ್ಲವೇ ? "ಪಾಪಿ ಚಿರಾಯು" ಎಂದು ಹಿರಿಯರು ಹೇಳಿದ್ದಾರೆ. ಆದ್ದರಿಂದ ಯಾರೂ ದುಃಖಿಸಬೇಡ್ರಿ" ಎಂದು ಸಾಂತ್ವನದ ನುಡಿಗಳನ್ನು ನುಡಿದರು.

# ತಬ್ಬಲಿ

" ಪ್ರಿಯ ಬಂಧುಗಳೇ, ಯುವಕ-ಯುವತಿಯರೇ, ಸ್ನೇಹಿತರೆ ಮತ್ತು ಗುರು ಹಿರಿಯರೇ, ಹಳ್ಳಿಯ ಸುಗ್ಗಿಯ ಸಿಂಗಾರ ವೀಕ್ಷಿಸಿ, ನಲಿಯು ದಿರುವವರೇ ವಿರಳ. ಭೂಮಿ ತಾಯಿ ತನ್ನ ವಿಶಾಲವಾದ ಮಾತೃ ಹೃದಯ ವನ್ನು ತೆರೆದಾಗ, ಹೊಲದಲ್ಲಿ ಬೆಳೆದು ನಿಂತ ಜೋಳದ ನಿಲುವು ಕೀಳುವುದು, ತೆನೆಕೊಯ್ಯುವುದು, ಕಣಮಾಡುವುದು, ರಾಶಿ ಮಾಡುವುದು, ಆಮೇಲೆ ಆಯಗಾರರು, ಭಿಕ್ಷುಕರು, ಜೋಗಿ ಜಂಗಮರು, ಜೋಗತಿಯರಿಗೆ ಭಿಕ್ಷೆ ನೀಡುವುದು, ಈ ದೃಶ್ಯ ನೋಡಿದವರ ಮನೋಲ್ಲಾಸವಾಗದೆ ಇರದು.

"ಇಷ್ಟೆಲ್ಲಾ ಸಡಗರದ ಸಂಭ್ರಮ ಮುಗಿಯುವ ಹೊತ್ತಿಗೆ ಸರಿಯಾಗಿ ಹಚ್ಚಡ, ಗೊಂಗಡಿ ಬಗಲಲ್ಲಿ ಇರಿಸಿಕೊಂಡು ಹಳ್ಳಿಯ ತಳವಾರ, ಬಡಗಿ, ಕಮ್ಮಾರ, ಕುಂಬಾರ, ಬಾರಿಕ, ದೇವರ ಪೂಜಾರಿಗಳು, ಚಲುವಾದಿ, ಬ್ಯಾಗಾರ, ಮಾದಿಗ ಇತ್ಯಾದಿ ಗ್ರಾಮ ಸೇವಕರು ಬಂದು, ತಮ್ಮ ಸಂಭಾ ವನೆಗಾಗಿ ಕೂಡುತ್ತಾರೆ.

"ಹೀಗೆ ಸಮರಸವಾಗಿ ಬಾಳುವ ಹಳ್ಳಿಯ ಜನರ ಚಿತ್ರ ಈಗೆಲ್ಲಿದೆ ? ನೀವೇ ಹೇಳಿರಿ ? ಚುನಾವಣೆಗಳಿಂದ ಜನರ ಹೃದಯದಲ್ಲಿ ಅಸೂಯೆ, ದ್ವೇಷಗಳು ತುಂಬಿಕೊಂಡಿವೆ. ರಾಜಕಾರಣಿಗಳು ತಮ್ಮ ಓಟಿಗಾಗಿ ಜನರ ಮನಸ್ಸನ್ನು ಕಲಕಿದ್ದಾರೆ. ಅಣ್ಣ-ತಮ್ಮಂದಿರಂತೆ ವರ್ತಿಸುತ್ತಿದ್ದವರು ಕೌರವರಾಗಿದ್ದಾರೆ. ತಮ್ಮ ಪಾಡಿಗೆ ತಾವು ಹಳ್ಳಿಗರು ಯಾವ ಭೇದ-ಭಾವ ವಿಲ್ಲದೆ ಒಂದಾಗಿ ಇದ್ದವರು, ಆ ಪಕ್ಷ, ಈ ಪಕ್ಷ ಎಂದು ತಮ್ಮ ತಮ್ಮಲ್ಲಿ ಈ ಪಕ್ಷ ತಂದುಕೊಂಡು, ಬಡಿದಾಡಲು ಶುರು ಮಾಡಿದ್ದಾರೆ. ಹಳ್ಳಿಗಳಲ್ಲಿ ನಡೆಯುವ ದೇವರ ಉತ್ಸವಗಳಲ್ಲೂ ಸಹ ರಾಜಕೀಯ ಸೇರಿಕೊಂಡು, ಗಲಬೆಗಳನ್ನು ಉಂಟು ಮಾಡಿದೆ. ರಾಜ ಕಾರಣಿಗಳ ಕುತಂತ್ರಗಳಿಂದ ಹಳ್ಳಿ ಗರು ಹದಗೆಟ್ಟು ಹೋಗಿದ್ದಾರೆ. ಅವರ ಕಂಬದ ಬಾಹುಗಳಲ್ಲಿ, ಧೃತರಾಷ್ಟ್ರ ನಾಲಿಂಗನದಲ್ಲಿ ಸಿಕ್ಕು ಜರ್ಜರಿತ ವಾಗುತ್ತಿದ್ದಾರೆ. ಇದಕ್ಕೆ ಕೊನೆ ಎಂದೋ ?

"ಇಂದು ರಾಜಕಾರಣಿಗಳೇ ಸರ್ವ ಶ್ರೇಷ್ಠರಂತೆ ವರ್ತಿಸುತ್ತಿದ್ದಾರೆ. ದೇಶದ ಸುಸಂಸ್ಕೃತರಿಗಾಗಲಿ, ಪಂಡಿತರಿಗಾಗಲಿ, ಕವಿಗಳಿಗಾಗಲಿ, ದೇಶದ ಹಿತ ಚಿಂತಕರಿಗಾಗಲಿ, ಧಾರ್ಮಿಕ, ಆಧ್ಯಾತ್ಮಿಕರಿಗಾಗಲಿ, ಊರಿನ ಅನುಭವಸ್ಥ ಹಿರಿಯರಿಗಾಗಲಿ, ಸಮಾಜ ಸೇವಕರಿಗಾಗಲಿ, ದೇಶಭಕ್ತರಿಗಾಗಲಿ ಇವರು ನಿರ್ಭಯವಾಗಿ, ನಿರಾತಂಕವಾಗಿ ಅವರಿಗೇ ಮಾರ್ಗದರ್ಶನ ಮಾಡುವ ಸ್ಥಾನ ತಮ್ಮದೆಂದು ಅಹಂಭಾವದಿಂದ ವರ್ತಿಸುತ್ತಿದ್ದಾರೆ. ಇವರ ಧರ್ಪ ಬಡಾಯಿಗಳಿಗೆ ಜನ, ನತಮಸ್ತಕರಾಗಿದ್ದಾರೆ.

"ಹಳ್ಳಿಗಳ ದುಃಸ್ಥಿತಿಗೆ ರಾಜಕಾರಣಿಗಳೇ ಕಾರಣ. ಇವರ ಅಜಾರೂಕತೆಯ ಆಡಳಿತದಿಂದ ಅಸಂಭದ್ಧತೆ ರಾರಾಜಿಸುತ್ತಿದೆ. ಚುನಾವಣೆಗಳಲ್ಲಿ ಕೇವಲ ತಮ್ಮ ಗೆಲಿವಿಗಾಗಿ ಜನರಿಗೆ ಆಸೆ, ಆಮಿಷಗಳನ್ನು ತೋರಿಸುತ್ತಾರೆ. ಜಾತಿ–ಮತ ಭೇದಗಳ ವಿಷ ಬೀಜ ಬಿತ್ತುತ್ತಾರೆ. ಮೋಸ, ವಂಚನೆ, ಲಂಚಗಳಿಂದ ಮುಗ್ಧ ಜನರನ್ನು ವಂಚಿಸುತ್ತಾರೆ. ಗೆಲ್ಲುವವರಿಗೂ ಹಳ್ಳಿಗಳ ಉದ್ಧಾರದ ಭಾಷಣಗಳನ್ನು ಬಿಗಿಯುತ್ತಾರೆ"

"ಐದು ವರುಷಗಳಿಗೊಮ್ಮೆ ಬರುವ ಚುನಾವಣೆಗಳು ಹಳ್ಳಿಯ ಜನರ ಜೀವನವನ್ನು ಕಲಕುವ ಧೂಮಕೇತುಗಳಾಗಿವೆ. ನ್ಯಾಯಾಂಗಗಳು ಅವನೀತಿಯ ಬಂಧನದಲ್ಲಿ ದುರ್ಬಲಗಳಾಗಿವೆ.

"ಲೋಕದಲ್ಲಿ ಧನಗಳಿಸುವುದು ಸುಲಭ. ಧಾನ್ಯಗಳಿಸುವುದು ಸುಲಭವಲ್ಲವೆಂಬುದು ಇಂದು ಭೂತಾಕಾರವಾಗಿ ಎದ್ದು ನಿಂತಿರುವ ಕಟುಸತ್ಯವಾಗಿದೆ ಇವುಗಳಿಗಾಗಿ ನಾವು ಪರದೇಶದವರನ್ನು ಸೆರಗೊಡ್ಡಿ ಬೇಡುವ ಸ್ಥಿತಿ ಬಂದಿದೆ. ಆದ್ದರಿಂದ ಯುವಕರಾದ ನಾವು ದೇಶದ ಹಿತರಕ್ಷಣೆಗೆ ಕಂಕಣ ಬದ್ಧರಾಗಿ ನಿಲ್ಲಬೇಕು. ಮುಂದೆ ಬರುವ ಚುನಾವಣೆಗಳಲ್ಲಿ ದೇಶ ರಕ್ಷಕರನ್ನು ಆರಿಸಬೇಕು. 'ಮತ' ಚಲಾಯಿಸುವಾಗ ಕುಲಂಕುಷವಾಗಿ ಯೋಚಿಸಿ, ಮತ ಚಲಾಯಿಸಬೇಕು...."

'ಯುವಕರ ಸಂಘ, ಶಿವಪುರ' ಇವರು ಏರ್ಪಡಿಸಿದ್ದ ಸಮಾರಂಭದ ವೇದಿಕೆಯ ಮೇಲೆ ನಿಂತು, ಯುವಕನಾದ ಗಂಗಾಧರನು ಭಾಷಣ ಮಾಡುತ್ತಿದ್ದನು. ಇವನ ಒಂದೊಂದು ಮಾತು ಮುಗಿದಾಗ ಜನ, ಚಪ್ಪಾಳೆಗಳ ಸುರಿ ಮಳೆ ಸುರಿಸುತ್ತಿದ್ದರು. ಕೆಲವರು 'ಶೀಟಿ' ಹೊಡೆಯುತ್ತಿದ್ದರು. ಕೆಲವರಂತೂ "ಹೋಯ್" ಎಂದು ಕೂಗುತ್ತಿದ್ದರು. ಇವರ ಈ ಕ್ರಿಯೆ ಇಂದ ಉತ್ತೇಜನಗೊಂಡ ಗಂಗಾಧರ, ವೀರಾವೇಶದಿಂದ ಭಾಷಣ ಮಾಡಿದ್ದ. ತನ್ನನ್ನು ಹದ್ದಿನ ಕಣ್ಣುಗಳಿಂದ ನೋಡುವ ರಾಜಕಾರಣಿ ಹನುಮಂತಪ್ಪನ ಭಂಟನನ್ನು ಇವನು ನೋಡಲಿಲ್ಲ. ದೇಶ ಸೇವೆಯ ಧ್ಯೇಯದಲ್ಲಿ ತನ್ನ ಶತೃಗಳ ಹುಟ್ಟನ್ನು ಅರಿಯಲಿಲ್ಲ. ತನ್ನ ಭಾಷಣದಿಂದ ಜನ, ಜಾಗೃತರಾಗುತ್ತಾರೆಂದು ಅಪಾರವಾಗಿ ನಂಬಿದ್ದ.

ರುದ್ರಪ್ಪ, ಗಂಗಾಧರನ ತಂದೆ. ಸಣ್ಣ ರೈತ, ಇರುವ ಐದು ಎಕರೆ ಭೂಮಿಯಲ್ಲಿ ಬಂದದ್ದನ್ನು ಉಂಡು, ಮಗನನ್ನು ಸಾಕಷ್ಟು ಓದಿಸಿದ್ದ. ಗಂಗಾಧರನಿಗೆ ಪ್ರಾಪ್ತ ವಯಸ್ಕಳಾದ ತಂಗಿಯೂ ಇದ್ದಾಳೆ. ಮಗನಿಗೆ ಸರಕಾರಿ ಉದ್ಯೋಗ ಸಿಗಲಿಲ್ಲವೆಂಬ ಕೊರಗಿನಲ್ಲಿ ರುದ್ರಪ್ಪ ನಲುಗಿ ಹೋಗಿದ್ದಾನೆ. ಹೆಂಡತಿ ನಾಗವ್ವ, ಗಂಡನಿಗೆ ಧೈರ್ಯ ಹೇಳುತ್ತಲೇ ಇದ್ದಾಳೆ. ಗಂಗಾಧರ ಹೊಲದಲ್ಲಿ ಕೊಳವೆ ಬಾವಿ ತೋಡಿಸಲು ನಿರ್ಧರಿಸಿದ. ಸರಕಾರಿ ಕೆಲಸದ ಹಂಬಲ ಬಿಟ್ಟು ಬಿಟ್ಟ. ಅಂತರ್ಜಲ ಸಂಶೋಧಕರನ್ನು ಕರೆಸಲು ಬ್ಯಾಂಕಿನಲ್ಲಿ ನೂರು ರೂಪಾಯಿ ಚಲಾನು ತುಂಬಿದ ಅವರು ಬೇಗನೆ ಬರದಿದ್ದಕ್ಕೆ ನಾಲ್ಕಾರು ಸಾರಿ ನಗರಕ್ಕೆ ಹೋಗಿ ಬಂದ.

ಹೊಲದಲ್ಲಿ ಅಂತರ್ಜಲ ಸಂಶೋಧನೆ ಮಾಡುತ್ತಿದ್ದ ಸಂಶೋಧಕರನ್ನು ಕುರಿತು ಗಂಗಾಧರ "ಸಾರ್, ಇದು ಬಂಗಾರದಂತ ಬೆಳೆ ಬೆಳೆಯುವ ಭೂಮಿ ಎಂತಹ ಪಸಲಾದರೂ ಸರಿ, ಬೆಳೆದು ನಿಲ್ಲುತ್ತದೆ. ದಯಮಾಡಿ ಈ ಭೂಮಿಯಲ್ಲಿ ಸರಿಯಾದ 'ಜಲ' ತೋರಿಸಿರಿ. ಈ ಭೂಮಿಯಿಂದಲೇ ನಮ್ಮ ಬದುಕು. ಇತ್ತೀಚೆಗೆ ಮಳೆ ಬಾರದಿದ್ದಕ್ಕೆ ಸರಿಯಾಗಿ ಬೆಳೆಯುತ್ತಿಲ್ಲ. ಆದ ಕಾರಣ ತಮ್ಮಲ್ಲಿ ಈ ನನ್ನ ಪ್ರಾರ್ಥನೆ." ಎಂದು ಅಂಗಲಾಚಿದ.

ಗಂಗಾಧರನನ್ನು ಅಡಿಯಿಂದ ಮುಡಿಯುವರಿಗೂ ನೋಡಿದ ಸಂಶೋಧಕ "ನಿಮ್ಮ ಭೂಮಿಯಲ್ಲಿ ತುಂಬಾ ನೀರಿದೆ. ಇದರಲ್ಲಿ ಸಂಶವೇ ಇಲ್ಲ. ಒಮ್ಮೆ ನೀವು ನಗರಕ್ಕೆ ಬಂದು, ಆಫೀಸಿನಲ್ಲಿ ನನ್ನನ್ನು ಮೀಟ್ ಮಾಡ್ರಿ. ಆಗ ಎಲ್ಲಾ ವಿಷಯ ಮಾತಾಡೋಣ ಬರುವಾಗ " ಎಂದು ಅರ್ಧಕ್ಕೆ ನಿಲ್ಲಿಸಿದ್ದಕ್ಕೆ ಗಂಗಾಧರ" ಹೇಳಿ ಸಾರ್, ಅದೇನು ಹೇಳಿ, ಮರೆ ಮಾಚದೆ ಹೇಳಿ. ಬರುವಾಗ ?" ಅಂದನು.

ಸಂಶೋಧಕ "ಅಲ್ಲಾರಿ, ನಿಮಗೂ ಗೊತ್ತಿದೆ ಎಲ್ಲ ? ಮಾಮೂಲು ಕೊಡದೆ ಯಾವ ಕೆಲಸಗಳು ಚಲಿಸಲಾರವು. ಬರುವಾಗ ನೀವು ಮಾಮೂಲು ತರದೆ ಬರಬೇಡಿರಿ" ಎಂದು ಲಜ್ಜೆ ಬಿಟ್ಟು ಹೇಳಿದ. ಕಾಲೆತ್ತಿನಂತೆ ಗೋಣು ಹಾಕಿದ ಗಂಗಾಧರ. ಲಂಚ ಕೊಡುವುದು ಅಪರಾಧವೆಂದು ಗೊತ್ತಿದ್ದರೂ ಅಸಾಹಕನಾಗಿದ್ದ. ಬಡತನದ ಬವಣೆ ಅವನ ಹೃದಯವನ್ನು ಬಗೆಯುತ್ತಿತ್ತು. ನೀರಾವರಿಯಿಂದಾದರೂ ತಮ್ಮ ಬದುಕು ಸುಗುಮವಾಗಬಹುದೆಂದು ಅವನ ಆಶಾಗೋಪುರ.

ತಾಲೂಕು ಮಟ್ಟದ ಯುವ ಪಕ್ಷದ ನಾಯಕನಾದ ಫಿಗ್ಮಿ ಹನುಮಂತಪ್ಪನಿಗೂ ಗಂಗಾಧರನ ತಂದೆ ರುದ್ರಪ್ಪನಿಗೂ ಹೊಲದ ದಾರಿಯ ಬಗ್ಗೆ ವಾಗ್ವಾದಗಳು ನಡೆದವು. ಮಾತಿನ ನಡುವೆ ರುದ್ರಪ್ಪ "ಅಲ್ರೀ, ಹನುಮಂತಪ್ಪನವರೆ, ನಾವು ನಿಮ್ಮ ಹೊಲದ ಬದುವಿನಲ್ಲಿ ತಲೆ ತಲಾಂತರದಿಂದ ಓಡಾಡುತ್ತಾ, ಬಂಡಿ ಹೊಡೆಯುತ್ತಾ ಬಂದಿದ್ದೇವೆ ನೀವು ಇದ್ದಕ್ಕಿದ್ದ ಹಾಗೆ ಹೀಗೆ ನಮ್ಮನ್ನು ತಡೆಯುವದನ್ನು ನೋಡಿದರೆ, ನನಗೆ ಆಶ್ಚರ್ಯವಾಗುತ್ತಿದೆ. ಕೆಳಗಿನಿಂದ ಹೋಗಬೇಕಂದರೆ ಅಲ್ಲಿ ದೊಡ್ಡ ಹಳ್ಳವಿದೆ. ಬೇರಲ್ಲೂ ನಮ್ಮ ಹೊಲಕ್ಕೆ ಹೋಗಲು ದಾರಿ ಇಲ್ಲ, ದಯಮಾಡಿ ಹೀಗೆ ತಕರಾರು ಮಾಡಬೇಡ್ರಿ" ಎಂದು ಕೇಳಿದ್ದ ಕಳಕಳಿಯಿಂದ.

ಫಿಗ್ಮಿ, ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ವಯಸ್ಸಿನ ತಾರತಮ್ಯವಿಲ್ಲದೆ "ಹೇ...., ಹೋಗೋಽಽ ನೀನೇನು ಹೇಳಬೇಡ, ಕೇಳಬೇಡ.

ಹೊಲದ ಬದುವಿನಲ್ಲಿ ಕಾಲಿಡಲೂ ಬಿಡುವದಿಲ್ಲ ಇದುವರೆಗೂ ನನಗೂ ನಿನಗೂ ವಿಶ್ವಾಸವಿತ್ತು. ಈಗ ಅದು ಇಲ್ಲ. ಆದಕಾರಣ ನಾನು ಬಿಡುವ ದಿಲ್ಲ. ದುಡಿಕಿನಿಂದ ನೀನೇನಾದರೂ ಹೋದರೆ 'ಕ್ರಿಮಿನಲ್' ಕೇಸು ನಿನ್ನ ಮೇಲೆ ಹಾಕಿ. ನಿನ್ನನ್ನು ಕೋರ್ಟಿಗೆ ಎಳೆಯುತ್ತೇನೆ. ಹುಷಾರ್" ಎಂದು ಕಿಡಿ ಕಾರುವ ಕಂಗಳಿಂದ ಹೇಳಿದ್ದ.

ಗರಬಡಿದವನಂತಾದ ರುದ್ರಪ್ಪ, "ನಾನು ಮಾಡಿದ ತಪ್ಪೇನು ?" ಅಂದಿದ್ದಕ್ಕೆ ಕ್ರೋಧನಾದ ಹನುಮಂತಪ್ಪ "ತಪ್ಪೇ ? ನಮ್ಮ ವಿರೋಧ ಪಕ್ಷದವರಿಗೆ ನೀನು ಓಟು ಹಾಕಿದ್ದೀಯ. ಅದು ನಮಗೆ ತಿಳಿದು ಬಂದಿದೆ. ಅದಕ್ಕಾಗಿ ನಿನಗೆ ಈ ಶಿಕ್ಷೆ ವಿಧಿಸಿದ್ದೇನೆ. ಇದೊಂದೇ ಉಪಾಯ ನನಗೆ ತಿಳಿದದ್ದು" ಅಂದಿದ್ದನು.

ರುದ್ರಪ್ಪನ ಮತಿಗೆ ಮಂಕು ಬಡಿದಂತಾಯಿತು. ಹನುಮಂತಪ್ಪನಿಗೆ ಏನು ಹೇಳಬೇಕೆಂಬುದೇ ತಿಳಿಯಲಿಲ್ಲ. ಒಂದು ಸಾರಿ ನಡೆನಿಗಿದ. ಏಕೆಂದರೆ ಹನುಮಂತಪ್ಪನಿಗೆ ಎಂ.ಎಲ್.ಎ. ಯಿಂದ ಎಂ. ಪಿ ವರೆಗೂ ಪರಿಚಯ ವಿದ್ದಾರೆ. ದೊಡ್ಡವರ ಬೆಂಬಲ ತನಗಿದೆ ಎಂಬ ಅಹಂಭಾವದಿಂದ ಸೊಕ್ಕಿ ಮೆರೆಯುತ್ತಾನೆ.

ಇಂಥವನನ್ನು ಬಗ್ಗುಬಡೆಯಲು ಒಬ್ಬ ರುದ್ರಪ್ಪನಿಂದ ಸಾಧ್ಯವೇ ? ಇದರಿಂದ ಮನನೊಂದ ಗಂಗಾಧರ. ಜನತೆಯನ್ನು ಒಂದು ಗೂಡಿಸಲು ಆಗಾಗ ಜನ ಜಾಗೃತಿಯ ಭಾಷಣಗಳನ್ನು ಮಾಡುತ್ತಿದ್ದ ತನ್ನ ಭಾಷಣ ದಿಂದ ಜನ ಎಚ್ಚೆತ್ತು ದುಷ್ಟರನ್ನು ಸದೆ ಬಡಿಯುತ್ತಾರೆಂದು ತಿಳಿದಿದ್ದ. ಆದರೆ ಜನ ಎಂಜಲಿಗೆ ಮಾರು ಹೋಗುತ್ತಾರೆಂದು ತಿಳಿದಿರಲಿಲ್ಲ.

ಆಫೀಸಿನಲ್ಲಿ ಗಂಗಾಧರನನ್ನು ಕಂಡ ಸಂಶೋಧಕ "ಓ ! ಬನ್ನಿ, ಮಿಸ್ಟರ್ ಗಂಗಾಧರವರೆ ! ನಾನು ನಿಮ್ಮ ನಿರೀಕ್ಷೆಯಲ್ಲೇ ಇದ್ದೆ. ಅಷ್ಟರಲ್ಲಿ ನೀವು ಬಂದ್ರಿ." ಅಂದನು ಕೂಡ್ರಲು ಹೇಳುತ್ತ.

ಗಂಗಾಧರ "ಸಾರ್, ನಿಮ್ಮ ಮಾಮೂಲು ಎಷ್ಟೆಂದು ಹೇಳಿದರೆ...?" ಅಂದನು.

"ಆಂ, ಹೂಂ" ಅಂವ ಸಂಶೋಧಕ ಆಫ್ಟಾಲ್ ತ್ರೀ ಹಂಡ್ರಡ್ ಆಗುತ್ತದೆ." ಅಂದನು.

ಪರಿಸ್ಥಿತಿಯನ್ನು ಅರ್ಥಮಾಡಿಕೊಂಡ ಗಂಗಾಧರ, ಮುನ್ನೂರು ರೂಪಾಯಿಗಳನ್ನು ಕೊಟ್ಟು, "ಸಾರ್, ಅರ್ಜಂಟಾಗಿ 'ಸರ್ಟಿಫಿಕೆಟ್' ಕಳಿಸಿ ಕೊಡ್ರಿ. ನಿರುದ್ಯೋಗದಿಂದ ತಿರುಗುತ್ತಿದ್ದ ನನಗೆ ಉದ್ಯೋಗ ಕೊಟ್ಟ ಪುಣ್ಯಬರುತ್ತದೆ. 'ಮುಂದೇನು' ? ಅಂದಿದ್ದವರಿಗೆ ದಾರಿ ತೋರಿಸಿದಂತಾ ಗುತ್ತದೆ" ಎಂದು ದೀನಸ್ಥಿತಿಯಿಂದ ಬೇಡಿಕೊಂಡ.

ಸಂಶೋಧಕ, "ನೀವಿನ್ನು ಹೋಗಬಹುದು. ಏನೂ ಚಿಂತೆ ಮಾಡ ಬೇಡ್ರಿ ತಪ್ಪದೇ ತಮಗೆ ಕಳಿಸಿಕೊಡುತ್ತೇನೆ" ಎಂದು ಹೇಳಿ ಬೀಳ್ಕೊಟ್ಟರು.

ಆ ದಿನ "ನಿಮ್ಮ ಸರ್ವೆ ನಂ—ಭೂಮಿಯಲ್ಲಿ ನೀರಿಲ್ಲ" ಅನ್ನುವ 'ಸರ್ಟಿಫಿಕೆಟ್' ಬಂದದ್ದನ್ನು ಓದಿದ ಗಂಗಾಧರನ ಜಂಗಾ ಬಲವೆ ಕುಸಿದು ಹೋಯಿತು. "ನೀರಿದೆ" ಎಂದು ಹೇಳಿದವರು ಹೀಗೇಕೆ ಮಾಡಿದರು ? ಒಂದು ವೇಳೆ ಸರ್ವೆ ನಂಬರ್ ಬದಲಿ ಆಗಿರಬಹುದೆ ? ಎಂದು ಅಂದು ಕೊಳ್ಳುತ್ತಾ ತಂದೆ-ತಾಯಿಗೂ ತಿಳಿಸದೆ ನಗರಕ್ಕೆ ಧಾವಿಸಿದ. ತಂದೆ-ತಾಯಿ ಗಳಿಗೆ ತಿಳಿಸಿದರೆ ಅವರು ನೊಂದು ಕೊಳ್ಳುತ್ತಾರೆಂದು ನಡೆದಿದ್ದ 'ಸರ್ಟಿ ಫಿಕೆಟ್' ರಾಂಗ್ ಆಗಿರಬಹುದು ಅನ್ನುವುದು ಅವನ ನಂಬಿಕೆಯಾಗಿತ್ತು.

ಬಸ್ಸಿನಲ್ಲಿ ಕುಳಿತು ಪ್ರಯಾಣಿಸುತ್ತಿದ್ದ ಗಂಗಾಧರನ ತಲೆಯಲ್ಲಿ ಆ ದಿನ ಹೇಳಿದ ಸಂಶೋಧಕನ ಮಾತುಗಳು ಮತ್ತೆ ಮೂಡಿ ಬಂದವು. "ಮಿಸ್ಟರ್ ಗಂಗಾಧರವರೆ. ನಿಮ್ಮ ಹೊಲದಲ್ಲಿ 'ವಾಟರ್' ಹೇರಳವಾಗಿದೆ. ನೀವು 'ಲೆಕ್ಕಿಮ್ಯಾನ್' ಸಾಲಕ್ಕಾಗಿ ನೀವು ಎಲ್ಲಿ ಪರದಾಡ ಬೇಕಾಗಿಲ್ಲ. ನಮ್ಮ 'ಸರ್ಟಿಫಿಕೆಟ್' ತಂಗೊಂಡು ಸುಲಭವಾಗಿ ಬ್ಯಾಂಕಿನಲ್ಲಿ ಸಾಲ ಪಡೆಯ ಬಹುದು" ಎಂದು ಹೇಳಿದ್ದು ಗಂಗಾಧರನ ತಲೆಯಲ್ಲಿ ಮಾರ್ದನಿಸಿದ್ದವು.

ಆಫೀಸಿಗೆ ಬಂದ ಗಂಗಾಧರ ಸಂಶೋಧಕನಿಗೆ "ಸಾರ್ ಏನಿದು ನಿಮ್ಮ ಸರ್ಟಿಫಿಕೇಟು ? ನೀವು ಹೇಳಿದ್ದೇನು, ಮಾಡಿದ್ದೇನು ?" ಅಂದನು ದುಃಖ ತಪ್ತ ಕಂಗಳಿಂದ.

ಸಂಶೋಧಕ, ನತಮಸ್ತಕನಾಗಿ "ಏನ್ಮಾಡೋದು ಗಂಗಾಧರವರೆ, ನೀವು ಆಗಾಗ ರಾಜಕಾರಣಿಗಳ ವಿರುದ್ಧ ಭಾಷಣ ಮಾಡಿದ ಪ್ರಭಾವವಿದು. ಯಾರೋ ಹನುಮಂತಪ್ಪನವರಂತೆ, ಎಂ.ಎಲ್.ಎ ಯವರಿಗೆ ನಿಮ್ಮ ಬಗ್ಗೆ ದೂರು ಹೇಳಿದ್ದಕ್ಕೆ ಅವರು ಕ್ರೋಧದಿಂದ ಬಂದು "ರೀ, ಆ ಗಂಗಾಧರರಿಗೆ ಸರ್ಟಿಫಿಕೆಟ್ 'ನೀರಿಲ್ಲ' ಎಂದು ಕೊಡ್ರಿ. ಇಲ್ಲವಾದರೆ ನಿಮ್ಮ ಕೆಲಸಕ್ಕೆ ಪಕ್ಕೆ ತರಬೇಕಾಗುತ್ತದೆ. ಅವನು ಮತ್ತು ಅವನ ಅಪ್ಪ, ರುದ್ರಪ್ಪನ ಬಗ್ಗೆ ನಮಗೆ ಬಹಳ ಪಿರ್ಯಾದೆಗಳು ಬಂದಿವೆ. ಆದ್ದರಿಂದ, ಸುಳ್ಳು ಸರ್ಟಿಫಿಕೆಟ್ ಕಳಿಸಿಕೊಡ್ರಿ" ಎಂದು ಖಡಾ ಖಂಡಿತವಾಗಿ ಹೇಳಿದ್ದಾರೆ. ಆದಕ್ಕೆ ನಿರ್ವಾಹ ವಿಲ್ಲದೆ ನಾನು ಈ ಕೆಲಸ ಮಾಡಬೇಕಾಯಿತು ನನ್ನನ್ನು ದಯಮಾಡಿ ಕ್ಷಮಿಸಿರಿ. ಇಲ್ಲವಾದರೆ ನನ್ನ ಕೆಲಸ ಹೋಗುತ್ತದೆ. ನಾನು, ನನ್ನ ಮಕ್ಕಳು ಭೀದಿಯಲ್ಲಿ ನಿಲ್ಲಬೇಕಾಗುತ್ತದೆ" ಎಂದು ಗದ್ಗದಿತ ಕಂಠದಿಂದ ಹೇಳಿದ.

ಸಂಶೋಧಕನ ಮಾತಿನಿಂದ ನಡುಗಿ ಹೋದ ಗಂಗಾಧರ. ಅವನ ಹೃದಯಕ್ಕೆ ಸಿಡಿಲು ಬಡಿದಂತಾಯಿತು. ತತ್ತರಿಸಿ ಹೋದ. ಮುಂದಿನ ಅವನ ಜೀವನ ಅವನಿಗೆ 'ಕರಾಳ ರಾತ್ರಿ'ಯಂತೆ ಕಂಡಿತು. ಕಂಗಳಿಂದ ನೀರು ಧಾರಾಕಾರವಾಗಿ ಸುರಿದವು. ಆಫೀಸಿನಿಂದ ಹೊರಗೆ ಭಾರವಾದ ಹೆಜ್ಜೆ ಇಡುತ್ತಿದ್ದಂತೆ ಹೊಸಿಲಲ್ಲೇ ಕುಸಿದು ಬಿದ್ದುಬಿಟ್ಟ !

ಅದುವರಿಗೂ ಮೂಕರಂತೆ ಕುಳಿತಿದ್ದ ಆಫೀಸಿನ ಸಿಬ್ಬಂದಿ ಗಾಬರಿ ಯಿಂದ ಓಡಿ ಬಂದು, ಬಾಗಿಲಲ್ಲಿ ಬಿದ್ದಿರುವ ಗಂಗಾಧರನನ್ನು ಎಬ್ಬಿಸಲು ಪ್ರಯತ್ನಿಸಿದರು. ಅವನು ಮಿಸುಕಾಡಲಿಲ್ಲ ! ಆಗಲೆ ಗಂಗಾಧರನ ಪ್ರಾಣ ಪಕ್ಷಿ ಹಾರಿ ಹೋಗಿ, ನೀಲಾಕಾಶದಲ್ಲಿ ಲೀನವಾಗಿತ್ತು !

# ಬಲಿದಾನ !

ಶ್ರೀದುರ್ಗೆಯ ಉತ್ಸವ ಸಣ್ಣ ಸಣ್ಣ ಬೀದಿ ಸುತ್ತಿ, ಮುಖ್ಯ ಬೀದಿಗೆ ಬಂದಿತ್ತು. ಚಕ್ಕಡಿಯಲ್ಲಿ ಮಂಟಪ ಕಟ್ಟಿ, ಬಣ್ಣ ಬಣ್ಣದ ಕಾಗದಗಳನ್ನು ಅಂಟಿಸಿದ್ದರು. ಚಕ್ಕಡಿ ಮತ್ತು ಮಂಟಪಗಳಿಗೆ ತಳಿರು ತೋರಣಗಳನ್ನು ಕಟ್ಟಿದ್ದರು. ವಿಧ ವಿಧ ಹೂಗಳಿಂದ ಅಲಂಕರಿಸಿದ್ದರು. ಮಂಟಪದಲ್ಲಿ ಶ್ರೀ ದುರ್ಗಾಮಾತೆಯ ಮೂರ್ತಿಯನ್ನು ಕೂಡ್ರಿಸಿ, ಮಲ್ಲಿಗೆ, ಸೇವಂತಿಗೆ, ಚಂಡು ಹೂಗಳಿಂದ ನಿರ್ಮಿಸಿದ ಮಾಲೆಗಳನ್ನು ಹಾಕಿದ್ದರು. ಅರಿಸಿಣ-ಕುಂಕುಮ ಹಚ್ಚಿ ಮುತ್ತೈದೆಯರು ಕಳಸ ಹಿಡಿದಿದ್ದರು. ದುರ್ಗಾ ಮಾತೆಯನ್ನು ಹೊತ್ತ ಚಕ್ಕಡಿಗೆ ಎತ್ತುಗಳನ್ನು ಹೂಡಿದ್ದರು. ಎತ್ತುಗಳಿಗೆ ಜೂಲು ಹಾಕಿ, ಹಣೆಗೆ ಗೆಜ್ಜೆ, ಕಟ್ಟಿ, ಕೊಂಬುಗಳಿಗೆ ಬಣ್ಣ ಬಳಿದಿದ್ದರು. ಉತ್ಸವ ನೋಡಿದವರ ಕಂಗಳು ತಣಿಯುವಂತೆ ಇತ್ತು. ಶ್ರೀ ದುರ್ಗಾ ಮಾತೆಯ ಕರಗಳಲ್ಲಿ ಹರಿತವಾದ ಕತ್ತಿ, ಡಾಲು, ವಿಧ ವಿಧ ಆಯುಧಗಳು ಕಂಗೊಳಿಸುತ್ತಿದ್ದವು.

ಊರಿನ ಗಣ್ಯವ್ಯಕ್ತಿಗಳಾದ ಉಮಾಪತಿ, ರಾಮಣ್ಣ, ವೆಂಕಣ್ಣ ಮತ್ತು ನಾಗಭೂಷಣ ಇವರು ಉತ್ಸವದ ಮುಂದೆ ಉಪಸ್ಥಿತರಿದ್ದರು. ಉತ್ಸವಕ್ಕೆ ಸುತ್ತಮುತ್ತ ಹಳ್ಳಿಗಳಿಂದ ಡೊಳ್ಳಿನವರು, ಮೇಳದವರು' ಅಲಗೆಯವರು, ನಂದಿಕೋಲಿನವರು, ನಗಾರಿಯವರು, ಡುರುಮುರಿಗಿಯವರು ಇನ್ನೂ ಅನೇಕ ವಿವಿಧ ವಾದ್ಯದವರು ಬಂದಿದ್ದರು. ಕೋಲಾಟದವರ ಆಟ, ಕರಡಿ ಮೇಳದವರ ಕುಣಿತ, ಅನೇಕ ನೃತ್ಯಗಳಿಂದ ನೋಡಿದವರ ಮನೋಲ್ಲಾಸವಾಗುವಂತೆ ಇತ್ತು. ಜನರ ತರತರದ ಕುಣಿತಗಳು, ಕೇಕೆಗಳು, ಆಗಾಗ ' ದುರ್ಗಾಮಾತೆಗೆ ಜೈ ' ಅನ್ನುವ ಘೋಷಣೆಗಳು ಮುಗಿಲು ಮುಟ್ಟುವಂತೆ ಇದ್ದವು. ಪ್ರತಿವರುಷ ಇದೇ ರೀತಿ ಉತ್ಸವಕ್ಕೆ ಜನ, ಹಳ್ಳಿ-ಹಳ್ಳಿಗಳಿಂದ ಬಂದು ಕಿಕ್ಕಿರಿದು ಬೊಮ್ಮನೂರಿನಲ್ಲಿ ಸೇರುತ್ತಿದ್ದರು. ಈ ವರುಷ ಉತ್ಸವದಲ್ಲಿ ಎಲ್ಲರಿಗಿಂತಲೂ ಹೆಚ್ಚಿಗೆ ಕೇಕೆ ಕುಣಿತಗಳಿಂದ

ಇದ್ದವನೆಂದರೆ 'ಹುಚ್ಚ ಹನುಮಂತ' ಅವನ ಲಯಬದ್ಧ ಕುಣಿತಗಳು ಜನರನ್ನು ಆಕರ್ಷಿಸಿದ್ದವು. ಹನುಮಂತ, ಬೊಮ್ಮನೂರಿನ ಜನರಿಗೆ ಚಿರಪರಿಚಿತನಾಗಿದ್ದನು, ಇವನ ಕತೆ ಕೇಳದವರು ವಿರಳ.

ಹನುಮಂತ ಎಸ್. ಎಸ್. ಎಲ್. ಸಿ. ಮುಗಿಸಿ ಬೊಮ್ಮನೂರಿನ ವಿಜಯ ಪ್ರೌಢ ಶಾಲೆಗೆ ರಾಜ್ಯಮಟ್ಟದಲ್ಲಿ ಪ್ರಥಮಸ್ಥಾನ ಪಡೆದಾಗ, ಊರಿನ ಹಿರಿಯರು ಸನ್ಮಾನಿಸಿದ್ದರು. ಶಾಲೆಯಲ್ಲಿ ಸಹ ವಿದ್ಯಾರ್ಥಿನಿಯಾದ ರೇಣುಕ ಆಗ ಹನುಮಂತನನ್ನು ಪ್ರೀತಿಸಿದ್ದಳು, ತನ್ನ ಮನದಾಶೆಯನ್ನು ಅವನಿಗೆ ತಿಳಿಸಿದ್ದಳು. ಅದಕ್ಕೆ ಹನುಮಂತ "ರೇಣುಕ, ನಿನ್ನ ಮೇಲೆ ನನಗೂ ಪ್ರೀತಿ ಇದೆ; ಆದರೆ ನಾವು ಬಡವರು, ನೀವು ಉಳ್ಳವರು. ನನ್ನ-ನಿನ್ನ ಸಂಬಂಧಕ್ಕೆ ನಿಮ್ಮ ತಂದೆ-ತಾಯಿಗಳು ಒಪ್ಪಬೇಕಲ್ಲಾ ? ನನ್ನ ತಂದೆ ತಾಯಿಗಳಿಗೆ ನಾನು ಒಬ್ಬನೇ ಮಗ, ನನ್ನ ಇಷ್ಟವೇ ಅವರ ಇಷ್ಟ. ಅವ ಅವರನ್ನು ಒಂದು ಮಾತು ಕೇಳುತ್ತೇನೆ" ಎಂದು ಹೇಳಿ ಸಮಾಧಾನಪಡಿಸಿದ್ದ ಹನುಮಂತ.

ಆದರೆ ರೇಣುಕ ತಂದೆ ತಾಯಿಗಳ ದರ್ಪಕ್ಕೆ ಮಣಿದು ಬೇರೆ ಲಗ್ನವಾಗಿದ್ದಕ್ಕೆ ಹನುಮಂತನ ಮನ ಕಲಕಿ, ಬುದ್ಧಿ ಭ್ರಮಣೆ ಆಗಿತ್ತು. ಆ ದಿನದಿಂದ ಸಿಕ್ಕಾಪಟ್ಟೆ ಮಾತನಾಡುವುದನ್ನು ಪ್ರಾರಂಭಿಸಿದ. ತಾನು ಏನು ಮಾತನಾಡುತ್ತೇನೆ ಅನ್ನುವ ಪರಿಜ್ಞಾನ ಕಳೆದುಕೊಂಡಿದ್ದ. ಮನನೊಂದ ತಂದೆತಾಯಿಗಳು ಕೈಲಾದ ಮಟ್ಟಿಗೆ ಡಾಕ್ಟರರಿಗೆ ತೋರಿಸಿ, ಗುಣವಾಗದಿದ್ದಕ್ಕೆ ಕೈಕಟ್ಟಿ ಕುಳಿತರು. ಊಟ- ತಿಂಡಿ ಅನ್ನದೆ, ಬಟ್ಟೆಗಳು ಹರಿದರೂ ಲೆಕ್ಕಿಸದೆ, ಬೀದಿ ಬೀದಿ ಅಲೆಯುತ್ತಾ ಎಲ್ಲರಲ್ಲಿಯೂ ಸೇರಿ ಹುಚ್ಚುಚ್ಚಾಗಿ ಮಾತನಾಡುತ್ತಾ ಹೋಗುತ್ತಿದ್ದ ಹನುಮಂತ.

ಹೆಂಗಸರು, ಗಂಡಸರು, ಯುವಕರು, ಯುವತಿಯರು, ಸಣ್ಣ-ಸಣ್ಣ ಮಕ್ಕಳೂ ದುರ್ಗಿಯ ಉತ್ಸವದಲ್ಲಿ ಭಾಗಿಯಾಗಿದ್ದರು. ಹಿರಿಯರು

ಶ್ರೀ ದುರ್ಗೆಯ ಗುಣಗಾನ ಮಾಡುತ್ತಿದ್ದರೆ, ಶಾಲಾ ಮಕ್ಕಳು ಗೀತೆಗಳನ್ನು ಹಾಡುತ್ತಿದ್ದರು. ಹೀಗೆ ಬಹು ವಿಜೃಂಭಣೆಯಿಂದ ಉತ್ಸವ ಮುಂದು ವರಿಯುತ್ತಾ ಮುಖ್ಯ ಬೀದಿಯಲ್ಲಿರುವ ಮಸೀದಿಯ ಸಮೀಪಕ್ಕೆ ಬಂದಿತ್ತು. ಇದ್ದಕ್ಕಿದ್ದಂತೆ ಉತ್ಸವದ ಮುಂದುಗಡೆ ಕೆಲವು ಜನ ಪ್ರತ್ಯಕ್ಷವಾಗಿ "ನಿಲ್ಲಿಸಿ, ನಿಮ್ಮ ಕೂಗಾಟ, ಚೀರಾಟಗಳನ್ನು. ಇಲ್ಲಿ ಯಾರೂ ಕೂಗಾಡಬಾರದು, ಎಲ್ಲರೂ ಮೌನವಾಗಿ ಸಾಗಬೇಕು. ಇಲ್ಲವಾದರೆ ಪರಿಣಾಮ ಬೇರೆ ಆಗು ತ್ತದೆ" ಎಂದು ಗಟ್ಟಿಯಾಗಿ ಕೂಗಿದ್ದಕ್ಕೆ ಉತ್ಸವ ಸ್ತಬ್ಧವಾಗಿತ್ತು.

ಆಗ ಜನರ ಮಧ್ಯದಿಂದ ಒಬ್ಬ ಯುವಕ ಕೂಗಿದ : "ಇದು ಸಾರ್ವ ಜನಿಕ ರಸ್ತೆ, ಇದನ್ನು ನೀವು ಕೇಳಬಾರದು, ಕೇಳಲು ನೀವು ಯಾರು ?" ಇನ್ನೊಬ್ಬ, "ಇದು ಸರಕಾರಿ ರಸ್ತೆ, ರಸ್ತೆಯಲ್ಲಿ ಯಾವ ಉತ್ಸವ ನಡೆದರೂ ಮೌನವಾಗಿ ಹೋಗಬೇಕೆಂಬ ಕಾನೂನು ಇಲ್ಲ" ಎಂದು ಕೂಗಿದನು.

ಪರಿಸ್ಥಿತಿ ಗ್ರಹಿಸಿದ ಮುಖಂಡರಾದ ಉಮಾಪತಿ, ರಾಮಣ್ಣ ನಾಗ ಭೂಷಣರವರು ಧಾವಿಸಿ ಬಂದು ಆ ಪುಂಡರನ್ನು ಕುರಿತು, "ಹೀಗೆಲ್ಲಾ ಇಲ್ಲಸಲ್ಲದ ನೆಪಗಳನ್ನು ಹೂಡಿ ಅಡೆತಡೆಗಳನ್ನು ಮಾಡಬೇಡಿರಿ" ಅಂದರು. ಜನರಲ್ಲಿ ಗುಜು ಗುಜು ಪ್ರಾರಂಭವಾಯಿತು.

ರಾಮಣ್ಣ, "ಅಲ್ಲಿ ನೋಡಿ ನಾಗಭೂಷಣರವರೆ ! ದಂಡು-ಕೋಲು, ಚೈನುಗಳ ಸಮೇತ ನಮ್ಮ ಮೇಲೆ ಬೀಳಲು ಬರುತ್ತಿದ್ದಾರೆ. ಇನ್ನು ನಾವು ಇದನ್ನು ಎದುರಿಸಲು ಸನ್ನದ್ಧರಾಗಬೇಕು" ಎಂದು ಹೇಳಿ ಜನಸಮೂಹ ವನ್ನುದ್ದೇಶಿಸಿ, "ಇವರು ನಮ್ಮನ್ನು ಹೊಡೆಯಲು ಬರುತಿದ್ದಾರೆ. ಹೆಂಗ ಸರು ಮಕ್ಕಳು ಇಲ್ಲಿಂದ ಆ ಕಡೆ ನಡೆಯಿರಿ. ಯುವಕರು ಎದುರಾಳಿಗಳನ್ನು ಪ್ರತಿಭಟಿಸಲು ಸನ್ನದ್ಧರಾಗಿರಿ" ಎಂದು ಗಟ್ಟಿಯಾಗಿ ಕೂಗಿದರು.

ತಮ್ಮ ಕಡೆ ಕೋಲು-ಚೈನುಗಳೊಡನೆ ಬರುತ್ತಿರುವ ದಾಳಿಕೋರರನ್ನು ನೋಡಿದ ಜನಸಮೂಹ ಗಾಬರಿಯಿಂದ 'ಹೋ-' ಎಂದು ದಿಕ್ಕಾಪಾಲಾಗಿ

ಓಡಿದರು. ನಾಗಭೂಷಣರು ಕೆಲವು ಯುವಕರೊಡಗೂಡಿ ಎದುರಾಳಿಗಳನ್ನು ಬಡಿಯಲು ಧೈರ್ಯವಾಗಿ ನಿಂತರು. ಮಾತಿಗೆ ಮಾತು ಬೆಳೆದು, ಹೊಡೆದಾಟ ಪ್ರಾರಂಭವಾಯಿತು. ಆಯುಧಗಳನ್ನು ಹಿಡಿದು ಬಂದ ಹಲ್ಲೆಕೋರರ ಕೈಯಲ್ಲಿ, ಒರೀಕೈಯಲ್ಲಿ ಇದ್ದ ಹಿಂದೂಗಳು ಬಹು, ಹೊಡೆತಗಳನ್ನು ಸಹಿಸಿಕೊಳ್ಳಬೇಕಾಯಿತು. ದಾಳಿ ಭಯಂಕರವಾಗಿತ್ತು.

ಈ ಗದ್ದಲ ನೋಡಿದ ಹುಚ್ಚ ಹನುಮಂತ ಗಡಿಬಿಡಿಗೊಂಡು, ಅಲ್ಲೇ ನಿಂತಿದ್ದನು. ಉತ್ಸವದ ಚಕ್ಕಡಿಗೆ ಕಟ್ಟಿದ ಎತ್ತುಗಳನ್ನು ಬಿಚ್ಚಿಕೊಂಡು ಚಕ್ಕಡಿ ಹೊಡೆಯುವವನು ಅಲ್ಲಿಂದ ಪರಾರಿಯಾಗಿದ್ದನು. ದುರ್ಗೆಯ ಎದುರು ನಡೆಯುವ ಹೊಡೆದಾಟದಲ್ಲಿ ಒಬ್ಬನು ಹುಚ್ಚ ಹನುಮಂತನಿಗೆ ಕೋಲಿನಿಂದ ತಲೆಗೆ ಬಲವಾಗಿ ಹೊಡೆದನು. ರಕ್ತ ಧಾರಾಕಾರವಾಗಿ ಸುರಿಯುತ್ತಿತ್ತು. ಇದರಿಂದ ಹನುಮಂತನು ಕೋಪಗೊಂಡು, ಎದುರಾಳಿಯನ್ನು ಕಾಲಿನಿಂದ ಜೋರಾಗಿ ಒದ್ದುಬಿಟ್ಟಾಗ, ಅವನು ದೂರಕ್ಕೆ ಹೋಗಿ ಬಿದ್ದನು. ಹನುಮಂತನ ಕೋಪ ನೆತ್ತಿಗೇರಿತ್ತು. ಕ್ರುದ್ಧನಾಗಿ ಆ ಕಡೆ ಈ ಕಡೆ ನೋಡಿದಾಗ, ಶ್ರೀ ದುರ್ಗಾಮಾತೆಯ ಕೈಯಲ್ಲಿಯ ಖಡ್ಗ, ರವಿಯ ಕಿರಣಗಳಿಂದ ಫಳಫಳನೆ ಮಿಂಚಿದ್ದು ಕಂಡಿತು.

ಸರಸರನೆ ಶ್ರೀ ದುರ್ಗೆಯ ಮೂರ್ತಿಯ ಹತ್ತಿರಕ್ಕೆ ಬಂದ ಹುಚ್ಚ ಹನುಮಂತನು, ಮಿಂಚಿನಂತೆ ದುರ್ಗೆಯ ಕೈಯಲ್ಲಿನ ಖಡ್ಗವನ್ನು ಕಿತ್ತುಕೊಂಡು, ಹಿಂದುಗಳ ಮೇಲೆ ಧುಮುಕಿದ್ದ. ಆ ಪುಂಡರಲ್ಲಿ ನಾಲ್ಕಾರು ಜನರ ರುಂಡಗಳನ್ನು ಚೆಂಡಾಡಿಬಿಟ್ಟನು. ಹೆಣಗಳು ಉರುಳಿಬಿದ್ದುದನ್ನು ನೋಡಿದ ಬಹುಜನರು ಹನಮಂತನ ಮೇಲೆ ಬೀಳಲು ಧಾವಿಸಿದರು. ರೌದ್ರನಾದ ಹನುಮಂತನು 'ಹೋ' ಎಂದು ಭಯಂಕರವಾಗಿ ಕೂಗಿ, ಮತ್ತಿಬ್ಬರನ್ನು ಕಡಿದು ತುಂಡರಿಸಿಬಿಟ್ಟನು. ಅವನ ಭಯಂಕರ ರೌದ್ರಾವತಾರವನ್ನು ನೋಡಿದವರು ಹೆದರಿ ಅಲ್ಲಿಂದ ಪಲಾಯನ ಮಾಡಿದರು. ಹನುಮಂತನ ಈ ವೀರ ಪ್ರತಾಪವನ್ನು ನೋಡಿದ ಜನರು ಮೆಚ್ಚಿದರು.

ತಲೆಯಿಂದ ರಕ್ತ ಬಹಳವಾಗಿ ಹೋಗಿದ್ದರಿಂದ ಹನುಮಂತನು ಮೂರ್ಛೆ ಬಿದ್ದುಬಿಟ್ಟನು.

ನಾಗಭೂಷಣರು ಕೆಲವು ಜನ ಯುವಕರೊಡನೆ ಹನುಮಂತ ಬಿದ್ದ ಸ್ಥಳಕ್ಕೆ ಧಾವಿಸಿ, ಉಪಚರಿಸುತ್ತಿರುವಾಗ, ಸುದ್ದಿ ತಿಳಿದ ಪೋಲಿಸ್ ಇನಸ್ಪೆಕ್ಟರರು ತಮ್ಮ ಸಿಬ್ಬಂದಿಯೊಡನೆ ಬಂದು, ಕೆಲವರನ್ನು ಬಂಧಿಸಿದರು. ಹನುಮಂತನನ್ನು ಆಸ್ಪತ್ರೆಗೆ ಸೇರಿಸಿ, ಗಣ್ಯವ್ಯಕ್ತಿಗಳನ್ನು ಠಾಣೆಗೆ ಬರಲು ತಿಳಿಸಿದರು.

ಹನುಮಂತನ ಸಾಹಸ, ಶೌರ್ಯಗಳನ್ನು ಮೆಚ್ಚಿಕೊಂಡ ಜನರು ಕಿಕ್ಕಿರಿದು ಆಸ್ಪತ್ರೆಯ ಆವರಣದಲ್ಲಿ ಬಂದಿದ್ದರು. ಆಗಾಗ, 'ಹನುಮಂತನಿಗೆ ಜೈ' ಎಂದು ಕೂಗುತ್ತಾ. "ಹನುಮಂತ ಹೇಗಿದ್ದಾನೆ !" ಎಂದು ಕೇಳು ತ್ತಿದ್ದರು. ಜನರನ್ನು ಹತೋಟಿಗೆ ತರಲು ಪೋಲಿಸರು ಶ್ರಮಿಸುತ್ತಿದ್ದರು. ನಾಗಭೂಷಣರು ಜನರನ್ನುದ್ದೇಶಿಸಿ, 'ಶಾಂತಿ ಶಾಂತಿ' ಎಂದು ಸಮಾಧಾನ ಮಾಡುತ್ತಿದ್ದರು.

ಹೊರಗಡೆ ಬಂದ ಉಮಾಪತಿಯವರು ಜನರನ್ನು ಕುರಿತು "ಪ್ರಿಯ ಬಂಧುಗಳೇ, ಈ ದಿನ 'ಸಂಗ್ರಾಮ'ದಲ್ಲಿ 'ಹುಚ್ಚ ಹನುಮಂತನು' ವೀರಾ ವೇಶದಿಂದ ಹೋರಾಡಿ, ಮಡಿದು ಅಮರನಾಗಿಬಿಟ್ಟ ! ಬಹಳ ರಕ್ತ ಹೋಗಿದ್ದರಿಂದ ಅವನನ್ನು ಉಳಿಸಿ ಕೊಳ್ಳಲು ಡಾಕ್ಟರರಿಂದ ಆಗಲಿಲ್ಲವಂತೆ. ಪ್ರಾಣ ಬಿಡುವಾಗ ಹನುಮಂತ 'ಭಾರತ ಮಾತೆಗೆ ಜೈ' ಎಂದು ಸಣ್ಣದಾಗಿ ಕೂಗಿದನಂತೆ". ಎಂದು ಹೇಳುವಾಗ ಅವರ ಕಂಗಳಿಂದ ನೀರ ಹನಿಗಳು ಧುಮುಕಿದ್ದವು.

ವಿಕ್ರಮ, ಜೂನ ೨೬. ೧೯೮೮

## ನಮ್ಮ ಪುಸ್ತಕಗಳು—

1. ಮಾತೆ–ಸೂರ್ಯ–ಹಿಪ್ಪಿಗಳು* (ಕವನಗಳು) 0–50
   ಶ್ರೀ ಟಿ ದೇವದಾಸ್
2. ಬಹುರೂಪಾ ವಸುಂಧರಾ* (ಪ್ರವಾಸ ಕಥನ) 3–00
   ಶ್ರೀ ಗುರುಮೂರ್ತಿ ಪಂಡಕೂರು
3. ಚಿತ್ತಲೆ ಪದ್ಯಗಳು* ಶ್ರೀ ಮೊ ಮ ಪಂಡಿತಾರಾಧ್ಯ 3–00
4. ಜಾನಪದ ಸಂಚಯ* (ಸಂಗ್ರಹ) 4–00
   ಶ್ರೀ ಕೆ. ವಿರುಪಾಕ್ಷಗೌಡ ಮತ್ತು ಶ್ರೀ ಗುರುಮೂರ್ತಿ ಪಂಡಕೂರು
5. ನಾರಾಯಣದೇವರ ಕೆರೆ* (ಗ್ರಾಮ ಚಿತ್ರ) 8–00
   ಶ್ರೀ ಧ್ರುವ ನಾರಾಯಣ
6. ಪರಂಪರಾಗತ* (ಪ್ರಬಂಧಗಳು) ಶ್ರೀ ರಸಿಕ ಪುತ್ತಿಗೆ 2–50
7. ಕಪ್ಪು* (ಕಾದಂಬರಿ) ಕುಂ. ವೀ. 10–00
8. ನಡಿಯಪ್ಪ ನಮ್ಮ ನಾಡೀಗೆ*(ಡೊಳ್ಳಿನ ಹಾಡು) 8–00
   ಶ್ರೀ ಕೆ. ವಿರುಪಾಕ್ಷಗೌಡ ಮತ್ತು ಶ್ರೀ ಮೋಟಿ ಕೊಟ್ರಪ್ಪ
9. ಇಜಿಯಣ್ಣನ ಹಾಡು (ಜನಪದ ಕಥನ ಕಾವ್ಯ) 15–00
   ಡಾ|| ಬಸವರಾಜ ಮಲಶೆಟ್ಟಿ
10. ಇನ್ನಾದರೂ ಸಾಯಬೇಕು (ಕತೆಗಳು) ಕುಂ. ವೀ. 10–00
11. ಷೋಕೇಸಿನ ಗೊಂಬೆ (ಕತೆಗಳು) 10–00
    ಶ್ರೀಮತಿ ಜಿ ಎಸ್ ಸುಶೀಲಾದೇವಿ ಆರ್ ರಾವ್
12. ವಾಸ್ತವ (ವಿಮರ್ಶೆ) ಆರ್ಕೆ ಮಣಿಪಾಲ್ 12–00
13. ತೊಗಲು ಗೊಂಬೆಯಾಟ 5–00
    ಶ್ರೀ ವಿರುಪಾಕ್ಷಗೌಡರು ಮತ್ತು ಹು ಶಿವಕುಮಾರ
14. ಚಕ್ರವ್ಯೂಹ (ಕಥಾ ಸಂಕಲನ) 15–00
    ಶ್ರೀ ಗುರುನಾಥ ಇನಾಮದಾರ
15. ದಿಗಂಬರ ಕಾವ್ಯ (ಕಾವ್ಯ) 20–00
    ಶ್ರೀ ಗುರುಮೂರ್ತಿ ಪೆಂಡಕೂರು
16. ಬಲಿದಾನ (ಕಥಾ ಸಂಕಲನ) ಶ್ರೀ ಉಪ್ಪಾರ ಬಸಪ್ಪ 15–00

---

* ಪ್ರತಿಗಳು ಮುಗಿದಿವೆ

ಪುಸ್ತಕ ದೊರೆಯುವ ಸ್ಥಳ : **ಯುವಕರ ಸಂಘ, (ರಿ.) ರಾಮನಗರ,**
**ಹಗರಿಬೊಮ್ಮನಹಳ್ಳಿ-583 212.** (ಬಳ್ಳಾರಿ ಜಿಲ್ಲೆ)